Photo by D. I. Chanthamian



ಬಹುಮಾನ
ಪಡೆದ ಶೀರ್ಷಿಕೆ

ಆಡುತ್ತಾ ವ್ಯಾಯಾಮ

ಕಳಿಸಿದವರು :
ಸಿ. ಜಗದಾಂಬಾ ಮಲ್ಲೇಶ್ವರಂ, ಬೆಂಗಳೂರು

ಮಕ್ಕಳ
ಕೂಟಗಳಲ್ಲಿ




ಪ್ರಖ್ಯಾತಿಪಟ್ಟ ಮಿಠಾಯಿಗಳು

ಕ್ರೀಮ್ ಟಾಫಿ ಮತ್ತು ತಾಜಾ ಹಣ್ಣು
ಕೂಡಿರುವ ಮಿಠಾಯಿಗಳಿಗೆ ಕೇಳಿರಿ

ಸಿ. ಅಂಡ್ ಇ. ಮೂರ್ಟನ್ (ಇಂಡಿಯಾ) ಲಿ.

## ಡೋಂಗರೇ ಬಾಲಾಮೃತ

★

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರ ಬೀಳಲು ಸಹಾಯವಾಗುತ್ತದೆ.




ರೌಂಡು, ಬಾದಾಮಿ, ಕಾಫಿ, ಚಂದ್ರಹಾರಗಳು, 24" ಒಂದೆಳೆಗೆ ರೂ. 11/- ಕರಿಮಣಿ ಚೈನು 18" 1ಕ್ಕೆ ರೂ. 5/-. 800 ಡಿಜೈನುಗಳ ಕ್ಯಾಟಲಾಗು ಉಚಿತ. ಪೋಸ್ಟೇಜು 1/-

ರಾಜಾ ಗೋಲ್ಡು ಕವರಿಂಗ್ ಕಂಪೆನಿ (ರಿಜಿ.)
ರಾಜಾ ಬಿಲ್ಡಿಂಗ್ಸ್; ಮಚಲಿಪಟ್ಟಣ.

ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ

ಸಂಪುಟ ೯ ]  ನವಂಬರ್ ೧೯೫೭  [ ಸಂಚಿಕೆ ೫

# ಪ ಟಾ ಕಿ

ಪಾವಣೆ ಕೊಟ್ಟು
ಪಟಾಕಿ ತಂದನು
ಪೋಕರಿ ಪುಟ್ಟಪ್ಪ.

ಕಡ್ಡಿಯಗೀರಿ
ಬೆಂಕಿ ಕೊಟ್ಟನು
ಕಿಲಾಡಿ ಕಿಟ್ಟಪ್ಪ.

" ಸುರ್‌ರ್ " ಯೆನ್ನುತ
ಕೈಯ ಪಟಾಕಿಯು
ಮೇಲಕೆ ಹಾರಿತ್ತು

" ಠೋಪ್ " ಯೆನ್ನುತ
ಗಿರಿಗಿರಿ ತಿರುಗುತ
ನೆಲಕ್ಕೆ ಬಿದ್ದಿತ್ತು.

—ಪ. ಸೀತಾರಾಮಭಟ್ಟ, ಮೂಡುಬಿದಿರೆ



# ದೀಪಾವಳಿಯಂದು






ಅಣ್ಣ ತಮ್ಮರಿದ್ದರು ಒಂದೂರಲಿ
ಇಬ್ಬರೂ ಚಿಕ್ಕವರೇ.
ಹದಿನಾಲ್ಕೊಬ್ಬಗೆ ಹನ್ನೆರಡೊಬ್ಬಗೆ
ಆಡುವ ಸಣ್ಣವರೆ.

ದೊಡ್ಡವಗಟ್ಟಿಗ ಸದಾಕಾಲವೂ
ತನ್ನ ಸುಖವನೇ ನೋಡುವನು.
ಕೆಲಸ ತಪ್ಪಿಸಲು ಸಂಧಿಸಿಕ್ಕಿದರೆ
ಸಾಕು, ಸಿಕ್ಕದೇ ಜಾರುವನು.

ದೀಪಾವಳಿ ಹಬ್ಬದ ದಿನದಲ್ಲಿ
ಅವರ ತಾಯಿಗೆ ಜ್ವರಬಂತು.
ಶುಶ್ರೂಷೆಯ ಮಾಡಲು ಯಾರಿಲ್ಲಾ,
ಅವರಿಗೆ ಬಲು ಕಷ್ಟವು ಬಂತು.

ಊರೊಳಗೆಲ್ಲಾ ನಕ್ಕುನಲಿಯುತಿರೆ
ಇವರ ಮನೆಯೊಳಗೆ ಸದ್ದಿಲ್ಲ.
ಹಗಲೆಲ್ಲಾ ಮನೆಯಲ್ಲೆ ಕೂತಿದ್ದು,
ಅಣ್ಣನಿಗೇನೂ ತೋರಿಲ್ಲ.

ಕತ್ತಲೆಯಾಗಲು ಊರೂರೆಲ್ಲಾ
ಜಗಜಗಿಸಿತು ದೀಪಗಳಿಂದ.
ಊರೊಳಗೆಲ್ಲಾ ಸುತ್ತೀಸುಳಿದೂ
ಬರಬೇಕೆಂದಣ್ಣನು ನೆನೆದ.

" ಎಲೋ ನೀನು ಅಮ್ಮನ ನೋಡುತ್ತ
ಎಚ್ಚರದಿಂದಿರು ಮನೆಯಲ್ಲೇ.
ನಾನುಹೋಗಿ ಸುತ್ತಾಡಿ ಬರುವೆ "ನೆಂದು,
ಓಡಿದ ನಣ್ಣನು ತ್ವರಿತಲೇ !



ಸಣ್ಣವನೇನೋ ಕದಲದೆ ತಾಯಿಯ
ಬಳಿಯಲ್ಲೆ ಸುಮ್ಮನೆ ಕುಳಿತ.
ತನಗೆ ಊರೊಳಗೆ ಸುತ್ತಲಿಕಿಲ್ಲೆಂದು
ಕೊಂಚವು ಚಿಂತಿಸಲಿಲ್ಲಾತ.

ತಾಯಿಗೆ ವೇಳೆಗೆ ಮದ್ದನು ಕೊಡತ
ನಿದ್ರಿಸದೇ ಸೇವೆಯ ಗೈದ.
ಮನೆಯಾ ಮಿಣಿಮಿಣಿ ದೀಪವೇ ಅವನಿಗೆ
ಆಯಿತು ದೀಪಾವಳಿಯ ಮುದ.

ಅತ್ತ ಆ ಅಣ್ಣ ಉತ್ಸಾಹದಿಂದ
ತಾಯಿಯ ಸಂಗತಿಯನು ಮರೆತ.
ಬಾಣ ಪಟಾಕಿಯ ಬೆಳಕನು ನೋಡಿ
ತಿರುಗುತಿದ್ದ ಚಪ್ಪಾಳಿಡುತ.

ಅಷ್ಟರಲ್ಲೊಂದು ಕಿಡಿ ಹಾರಿಬಂದು
ಅವನ ಬಟ್ಟೆಯಲ್ಲೇ ಬಿತ್ತು.
ಭಗ್ಗನೆ ಬೆಂಕಿಯು ಹಿಡಿಯಿತು ಮೈಯಲಿ
ಅವನ ಕೈ ಕಾಲೇಬಿತ್ತು!

ಸುತ್ತುಮುತ್ತಿನವರೆಲ್ಲರು ಸೇರಿ,
ಒಡನೇ ಉರಿಯನ್ನಾರ್ಸಿದರು.
ಮದ್ದು ಹಚ್ಚಿ ಕಟ್ಟು ಕಟ್ಟಿ ಅವನ,
ಮನೆಗೆ ಹೇಗೊ ತಂದ್ಹಾಕಿದರು.

ಅಣ್ಣ ಬಂದನೆಂದು ಸಂತಸದಿಂದಲಿ
ತಮ್ಮ ಬಾಗಿಲನು ತೆರೆದಾಗ,
ನೋವಿಂ ನರಳುತ, ನಾಚಿ ತಲೆಬಾಗಿ—
ದಣ್ಣನ ನೋಡಿದ ನವನಾಗ!







1


2


3


4


5


6


7


8


9

ಇಲ್ಲಿ ಒಂಭತ್ತು ಚಿತ್ರಗಳಿವೆ. ಇವುಗಳಲ್ಲಿ ಪತ್ರಿಚಿತ್ರದಲ್ಲಿಯೂ ನಮ್ಮ ಚಿತ್ರಗಾರರು ಒಂದೊಂದು ತಪ್ಪು ಮಾಡಿದ್ದಾರೆ. ಆ ತಪ್ಪನ್ನು ನೀವು ಕಂಡುಹಿಡಿಯಬಲ್ಲಿರಾ? ಸರಿಯಾದ ಉತ್ತರಕ್ಕೆ ಬರುವತಿಂಗಳು "ಚಂದಮಾಮ" ನೋಡಿರಿ.




# ಹಗಲು ವೇಷ



ರಾಮಗಿರಿಯಲ್ಲಿ ಮಂಗಳಾಚಾರಿ ಎಂಬೊಬ್ಬ ವೇಷಧಾರಿಯಿದ್ದ. ಅವನ ತಾತಮುತ್ತಾತಂದಿರು ರಾಜಾಸ್ಥಾನದಲ್ಲಿ ಹಗಲುವೇಷ ಹಾಕುವುದರಲ್ಲಿ ಮೆಚ್ಚುಗೆಪಡೆದಿದ್ದರು. ಆದರೆ ಮಂಗಳಾಚಾರಿ ಬರೀ ಹೆಸರಿಗೆಮಾತ್ರ ವೇಷಧಾರಿಯೇಹೊರತು, ಬಹಳ ಸೋಮಾರಿ, ಮಂಕ.

ಆದರೆ ಆತನಿಗೆ ಒಬ್ಬ ಮಗನಿದ್ದ. ಹೆಸರು ರಂಗಾಚಾರಿ. ತಾತಮುತ್ತಾತಂದಿರ ಹೆಸರಿಗೆ ಒಪ್ಪ ಹಾಕುವಂತೆ ಹುಟ್ಟಿದ್ದ. ಬಹಳ ಬುದ್ಧಿಶಾಲಿ. ವೇಷಹಾಕಿ ದೊಡ್ಡ ದೊಡ್ಡ ರಾಜಮಹಾರಾಜರನ್ನು ಮೆಚ್ಚಿಸುತ್ತಿದ್ದ. ಅವನು ಸಂಪಾದಿಸಿ ತಂದುದನ್ನು ಪುಷ್ಕಳವಾಗಿ ಊಟಮಾಡುತ್ತ, ತಂದೆ ಮಂಗಳಾಚಾರಿ ಇನ್ನಷ್ಟು ಸೋಮಾರಿಯಾದನು.

ಒಮ್ಮೆ ಮಂಗಳಾಚಾರಿಯನ್ನು ಕುರಿತು ಅವನ ಹೆಂಡತಿ—"ಹೀಗೆ ಸುಮ್ಮನೆ ಮನೆಯಲ್ಲಿ ಕುಳಿತರೆ ಹೇಗೆ? ಅರಸರ ಸಭೆಗೆ ಹೋಗಿ ಒಂದು ಕರೆಯುವ ದನವನ್ನುಕೇಳಿ ತನ್ನಿ" ಎಂದಳು.

ಮಂಗಳಾಚಾರಿ ರಾಜನನ್ನು ಭೇಟಿಮಾಡಿ, ಅವನ ಅಪ್ಪಣೆ ಯಂತೆ, ಅರಸನ ಗೋಶಾಲೆಯಿಂದ ಒಳ್ಳೇಕೊಬ್ಬಿದ ಒಂದು ಎತ್ತನ್ನು ಆರಿಸಿ, ಅದನ್ನು ತನ್ನ ಮನೆಯಕಡೆಗೆ ಹೊಡೆದುಕೊಂಡು ಹೊರಟನು.

ಮನೆಗೆ ಬರುತ್ತಲೇ ಅವನ ಪತ್ನಿ "ಅಯ್ಯೊ! ಕರೆಸುವ ದನವನ್ನು ತರಬೇಕೆಂದರೆ ನೀವು ಎತ್ತನ್ನುತಂದಿರಲ್ಲಾ!" ಎಂದು ತುಂಬಾ ಜರಿದಾಡ ಹತ್ತಿದಳು.

ಮಂಗಳಾಚಾರಿ—"ಓಹೊ! ಹಾಗೇನು? ನನಗೆ ಗೊತ್ತಾಗಿಲ್ಲ. ಹಾಗಾದರೆ ಈಗ ಏನು ಮಾಡಲಿ?" ಎಂದು ಕೇಳಿದನು.

"ನಮಗೆ ಈ ಎತ್ತೇಕೆ? ಈಗಲೇ ಇದನ್ನು ಎಲ್ಲಿಯಾದರೂ ಮಾರಿ ಹಣ ತೆಗೆದುಕೊಂಡು ಬನ್ನಿ" ಎಂದಳು. ಮಂಗಳಾಚಾರಿ ಆ ಎತ್ತಿನೊಂದಿಗೆ ಸಂತೆಗೆ ಹೊರಟನು.

ದಾರಿಯಲ್ಲಿ ಅವನಿಗೆ ಇಬ್ಬರು ಕಳ್ಳರು ಇದಿರಾದರು. ಇವನೊಬ್ಬ ಮುಟ್ಠಾಳನೆಂದು ಅವರಿಗೆ ಮೊದಲೇ ಗೊತ್ತಿತ್ತು.

ಸಂಗತಿ ತಿಳಿದು ಕಳ್ಳರೆಂದರು: "ಇದನ್ನು ಮಾರಲಿಕ್ಕಾದರೆ ಸಂತೆಯ ವರೆಗೆ ಯಾಕೆ

ಆರ್. ಕೆ. ಆನಂದ - ಕುತ್ತೆತೂರು





ಹೋಗಬೇಕು? ನಾವೇ ಕೊಂಡುಕೊಳ್ಳು ತ್ತೇವೆ" ಎಂದು ಹಿರಿಯಕಳ್ಳ ಹೇಳಿದ. ಆಗ ಚಿಕ್ಕಕಳ್ಳ—"ಎಷ್ಟು ಕ್ರಯ?" ಎಂದು ವಿಚಾರಿಸಿದ.

"ಅದು ನನಗೆ ಗೊತ್ತಿಲ್ಲ" ಎಂದು ಮಂಗ ಳಾಚಾರಿ ನಿಜವನ್ನೆ ಹೇಳಿದ. ಆಗ ಕಳ್ಳರು ಯೋಚನೆಯಿಂದ ತಲೆದೂಗಿದರು.' ಇದಕ್ಕೆಲ್ಲ ಕ್ರಯಕಟ್ಟಲಿಕ್ಕೆ ನಮ್ಮ ತಂದೆ ಬಹಳ ಗಟ್ಟಿ ಗರು. ಅಲ್ಲಿಗೆ ಹೋಗುವ ಬನ್ನಿ" ಎಂದನು ಕಳ್ಳರಣ್ಣ. ಅವನ ತಮ್ಮನು ಎತ್ತನ್ನು ಹೊಡೆದುಕೊಂಡು ಮುಂದೆ ಹೊರಟಾಗ, ಮಂಗಳಾಚಾರಿ ಅವರ ಹಿಂದಿಂದೆ ಹೊರಟನು.

ಇನ್ನೂರು ರೂಪಾಯಿ ಬೆಲೆಬಾಳತಕ್ಕ ಎತ್ತು ಅದಾಗಿತ್ತು. ಆದರೆ ಆ ಕಳ್ಳರ ತಂದೆ— "ಇದಕ್ಕೆ ನಾಲ್ಕುರೂಪಾಯಿಗಿಂತ ಹೆಚ್ಚಿಗೆ ಯಾತಕ್ಕೆ?" ಎಂದು ತನ್ನ ಅಭಿಪ್ರಾಯ ತಿಳಿಸಿ ದನು. ಅಣ್ಣನು ನಾಲ್ಕುರೂಪಾಯಿಗಳನ್ನು ತಂದು ಮಂಗಳಾಚಾರಿಗೆ ಕೊಟ್ಟನು. ಅದ ರೊಂದಿಗೆ ಮಂಗಳಾಚಾರಿ ಅಲ್ಲಿಂದ ಹೊರಡು ವಾಗ—"ನಿಲ್ಲಯ್ಯಾ. ಸಂತೆಯವರೆಗೆ ಹೋಗುವ ಅಗತ್ಯವಿಲ್ಲದಂತೆ ನಿನಗೆ ಸುಲಭ ವಾಗಿ ಇಲ್ಲಿಯೇ ವ್ಯಾಪಾರ ಮುಗಿಸಿಬಿಟ್ಟೆ ವಷ್ಟೆ? ಮತ್ತೆ ನನ್ನ ಬಹುಮಾನವೆಲ್ಲಿ?" ಎಂದನು ದೊಡ್ಡಕಳ್ಳ.

ಮಂಗಳಾಚಾರಿ ಒಂದು ರೂಪಾಯಿ ಯನ್ನು ಅವನಿಗೆ ಕೊಟ್ಟು ಹೋಗುತ್ತಿರು ವಾಗ, ಸಣ್ಣಕಳ್ಳ ಅವನನ್ನು ಕರೆದು,— "ಅಯ್ಯಾ! ಎತ್ತನ್ನು ಇಲ್ಲಿಯವರೆಗೆ ನಾನೇ ಹೊಡೆದುಕೊಂಡು ಬಂದೆನಲ್ಲವೆ? ನನಗೇನೂ ಕೊಡದೆ ಹೋಗುತ್ತೀರಾ?" ಎಂದನು.

ಅವನಿಗೂ ಒಂದು ರೂಪಾಯಿಯನ್ನು ಕೊಟ್ಟು ಹಿಂದಿರುಗುವಾಗ ಆ ಕಳ್ಳರ ತಂದೆ— "ಏನಯ್ಯಾ, ನಿನ್ನ ಎತ್ತಿಗೆ ಬೆಲೆಕಟ್ಟಿದ ನನಗೆ ಏನೂ ಇಲ್ಲವೆ?" ಎಂದನು. ಮಂಗಳಾಚಾರಿ ಕೈಯಲ್ಲಿ ಮಿಕ್ಕ ಎರಡು ರೂಪಾಯಿಗಳನ್ನೂ ಆ ಮುದುಕನ ಕೈಗಿಟ್ಟನು. ಬಳಿಕ ಬರಿಕೈ ಗಳನ್ನು ಆಡಿಸಿಕೊಳ್ಳುತ್ತಾ ಮನೆಗೆ ಬಂದು ಸೇರಿದನು.

ಅವನಹೆಂಡತಿ ಜರುಗಿದ ಸಂಗತಿಯನ್ನೆಲ್ಲಾ ಕೇಳಿ ಗೋಳಾಡಲಾರಂಭಿಸಿದಳು.

ಆಗ ಅವರ ಮಗ ರಂಗಾಚಾರಿ ಮನೆಗೆ ಬಂದ. ತಾಯಿಯ ಗೋಳಾಟವನ್ನು ಕೇಳಿ— "ಯಾಕೆ ಚಿಂತಿಸುತ್ತಿ ಅಮ್ಮಾ! ಆ ಕಳ್ಳರಿಗೆ ತಕ್ಕಬುದ್ಧಿ ಕಲಿಸುತ್ತೇನೆ" ಎಂದು ಸಮಾಧಾನ

ಹೇಳಿದನು. ಬಳಿಕ ತಂದೆಯನ್ನು ಕರೆದು ಕೊಂಡು ಅತ್ತ ಹೋಗಿ, ಆ ಕಳ್ಳರ ಮನೆ ಎಲ್ಲಿದೆಯೋ ನೋಡಿ ಗುರುತಿಟ್ಟುಕೊಂಡ.

ರಂಗಾಚಾರಿಯನ್ನು ಮೀರಿಸತಕ್ಕ ಹಗಲು ವೇಷದವರು ಆಗ ಬೇರೆಯಾರೂ ಇರಲಿಲ್ಲ. ಅವನು ವೇಷಕ್ಕೆ ತಕ್ಕಹಾಗೆ ಕಂಠಸ್ವರವನ್ನೂ ಬದಲಾಯಿಸಿಕೊಳ್ಳುವಷ್ಟು ಸಮರ್ಥನಾಗಿದ್ದ. ಅವನು ಸ್ತ್ರೀವೇಷಹಾಕಿಕೊಂಡು ಕಳ್ಳರು ಬರು ಹೋಗುವ ದಾರಿಯಲ್ಲಿ ಕುಳಿತುಕೊಂಡು "ಅಯ್ಯೊ! ನನ್ನ ಪತಿ! ನನ್ನ ಪತಿ!...." ಎಂದು ಅಳಲಾರಂಭಿಸಿದನು.

ಆ ದಾರಿಯಲ್ಲಿ ಬರುತ್ತಿದ್ದ ಕಳ್ಳರ ತಮ್ಮನು ಅವಳನ್ನು ನೋಡಿ "ಯಾಕೆ ಅಳುತ್ತಿ?" ಎಂದು ವಿಚಾರಿಸಿದನು.

ರಂಗಾಚಾರಿ ಹೆಂಗುಸಿನ ಕಂಠದಿಂದ— "ಅಯ್ಯೊ! ನನ್ನ ಪತಿಯನ್ನು ಹುಲಿ ಎತ್ತಿ ಕೊಂಡು ಹೋಯಿತು. ಇನ್ನು ನನಗೆ ಯಾರು ಗತಿ!" ಎಂದು ಬಿಕ್ಕಿಬಿಕ್ಕಿ ಅತ್ತನು. ಕಳ್ಳನು ಅವಳನ್ನು ಸಮುದಾಯಿಸುತ್ತಾ–"ಹೋದವ ನಿಗೋಸ್ಕರ ಅತ್ತು ಏನುಫಲ? ನಿನ್ನನ್ನು ನಾನು ಮದುವೆ ಮಾಡಿಕೊಳ್ಳುತ್ತೇನೆ ನಡೆ" ಎಂದನು. ರಂಗಾಚಾರಿ ಅವನಹಿಂದೆಯೇ ಹೋಗುವಾಗ ದಾರಿಯಲ್ಲಿ ಆ ಕಳ್ಳನ ಅಣ್ಣ ಇದಿರಾಗಿ–"ಯಾರು ಈ ಹುಡುಗಿ?" ಎಂದು ಕೇಳಿದನು.

"ನನ್ನ ಹೆಂಡತಿ. ನಾನು ಇವಳನ್ನು ಮದುವೆಮಾಡಿಕೊಳ್ಳುವುದಾಗಿ ನಿಶ್ಚಯಿಸಿ ಬಿಟ್ಟೆ" ಎಂದನು ತಮ್ಮ. ಅದಕ್ಕೆ ಅಣ್ಣ—



"ಅದು ಹೇಗೆ? ನನಗೆ ಮದುವೆಯಾಗದೆ ನೀನು ಮೊದಲು ಮದುವೆಮಾಡಿಕೊಳ್ಳುವುದು ಎಷ್ಟುಮಾತ್ರಕ್ಕೂ ಸರಿಯಲ್ಲ. ಇವಳನ್ನು ನಾನೇ ಮದುವೆಮಾಡಿಕೊಳ್ಳುತ್ತೇನೆ" ಎಂದು ಜಗಳಕೆದರಿದನು.

ಹೀಗೆ ಇಬ್ಬರೂ ವಾದವಿವಾದಮಾಡುತ್ತಾ ಮನೆಯನ್ನು ಸೇರಿದರು.

ಆಗ ಅಲ್ಲಿದ್ದ ಕಳ್ಳರ ತಂದೆ "ನನ್ನ ಅಪ್ಪಣೆ ಯಿಲ್ಲದೆ ನೀವಿಬ್ಬರೂ ಮದುವೆಮಾಡಿಕೊಳ್ಳ ಕೂಡದು. ನಿಮ್ಮ ತಾಯಿ ಸತ್ತಂದಿನಿಂದ ನಾನು ಮದುವೆಮಾಡಿಕೊಳ್ಳದೆಯೇ ಇದ್ದೇನೆ. ವಿವಾದಾಸ್ಪದೆಯಾದ ಈ ಹುಡುಗಿಯನ್ನು ನಾನೇ ಮದುವೆ ಮಾಡಿಕೊಂಡುಬಿಟ್ಟರೆ ರಗ ಳೆಯೇ ಯಿಲ್ಲವಲ್ಲಾ!" ಎಂದನು.

ಆಗ ರಂಗಾಚಾರಿ ಅತ್ಯಂತ ಗಾಬರಿ ಯಿಂದ, ಸ್ತ್ರೀಕಂಠದಿಂದಲೇ—"ಅಯ್ಯಯ್ಯೊ!

ನನ್ನ ನಗ! ನಗ!—" ಎಂದು ಕೂಗಿದನು.

ಕಳ್ಳರು "ಏನು? ಏನು?" ಎಂದು ಕೇಳಿದರು.

"ನನ್ನ ಗಂಡನನ್ನು ಹುಲಿಹಿಡಿಯುತ್ತಲೇ, ನನ್ನ ಮೈಯಲ್ಲಿರುವ ನಗಗಳನ್ನು ನೋಡಿ ನನಗೆ ಕಳ್ಳರ ಹೆದರಿಕೆ ಹಿಡಿಯಿತು. ನಗ ಗಳನ್ನೆಲ್ಲಾ ತೆಗೆದು ಗಂಟುಕಟ್ಟಿ ಆಚೆ ಈಚೆ ಪೊದರುಗಳಲ್ಲಿ ಅಡಗಿ ಸಿಟ್ಟಿದ್ದೇನೆ. ನೀವು ಬೇಗನೇ ಹೋಗಿ ಆ ನಗಗಳನ್ನೆಲ್ಲಾ ಹುಡುಕಿ ಕೊಂಡುಬನ್ನಿ. ಆಗ ನಾನು ಯಾರಿಗೂ ಸಿಟ್ಟಾಗದಂತೆ ನನ್ನ ಮದುವೆಯ ನಿಶ್ಚಯ ತಿಳಿಸುತ್ತೇನೆ" ಎಂದನು.

"ಹೌದು, ಹೌದು. ಯಾರು ಮೊದಲು ಆ ನಗಗಳನ್ನು ತರುತ್ತಾರೋ ಅವರನ್ನು ತಾನೇ ಮದುವೆಮಾಡಿಕೊಳ್ಳುತ್ತಿ?" ಎಂದು ಕೇಳಿದನು ಕಳ್ಳನ ಅಣ್ಣ. ರಂಗಾಚಾರಿ "ಹೌದು" ಎಂದ. ಕೂಡಲೇ ಇಬ್ಬರು ಕಳ್ಳರೂ ಆ ಕಡೆಗೆ ಓಡಿದರು.

ಆಗ ಆ ಕಳ್ಳರತಂದೆ–" ಅದೃಷ್ಟವಶಾತ್ ಆ ನಗಗಳು ಮೊದಲು ನನಗೇ ಸಿಕ್ಕಿದರೆ ನೀನು ಮಾತು ತಪ್ಪಲಾರಿಯಷ್ಟೆ?" ಎಂದು ಕೇಳಿದನು.

"ನಿಮ್ಮ ಅದೃಷ್ಟ ಈಗಲೇ, ತೋರಿ ಸುತ್ತೇನೆ" ಎಂದು ರಂಗಾಚಾರಿ ತನ್ನಮೇಲಿನ ಮುಸುಕನ್ನು ತೆಗೆದನು. ಮುದುಕನು "ಅರೆ! ನೀನು ಮದುಮಗಳಲ್ಲವೆ?" ಎಂದು ಬಾಯಿ ಬಿಟ್ಟನು. "ಮದುವೆಬೇಕೆನಿನಗೆ?" ಎಂದು ಕೇಳುತ್ತಾ, ರಂಗಾಚಾರಿ ಮೂಲೆಯಲ್ಲಿದ್ದ ದೊಣ್ಣೆಯನ್ನೆತ್ತಿಕೊಂಡು ಮುದುಕನ ಬೆನ್ನ ಮೇಲೆ ಚೆನ್ನಾಗಿ ಬಾರಿಸಿಬಿಟ್ಟನು. "ಇಷ್ಟು ದಿನ ದಾರಿಹೋಕರಿಗೆ ಮೋಸಮಾಡಿಕೊಳ್ಳೆ ಹೊಡೆದ ಧನವೆಲ್ಲ ಎಲ್ಲಿದೆ ಹೇಳು. ಇಲ್ಲದಿದ್ದರೆ ನಿನ್ನ ತಲೆಯನ್ನು ಒಡೆಯುವೆನು" ಎಂದು ಗದರಿಸಿದನು ರಂಗಾಚಾರಿ.

ಮುದುಕನು ತನ್ನವಶವಿದ್ದ ಧನವೆಲ್ಲ ತೋರಿಸಿದನು. ರಂಗಾಚಾರಿ ಆ ಮುದುಕ ನನ್ನು ಹೆಡೆಮುಡಿಕಟ್ಟಿ ಮೂಲೆಯಲ್ಲಿ. ಕೆಡವಿ, ಎಲ್ಲಾ ಧನವನ್ನೂ ಮೂಟೆ ಕಟ್ಟಿಕೊಂಡು, ಆ ಎತ್ತಿನಮೇಲೆಯೇ ಹೇರಿಕೊಂಡು ತನ್ನ ಮನೆಗೆ ಹೋಗಿಬಿಟ್ಟನು.






## 10

[ಆಲಯದಲ್ಲಿ ಹುಲಿ—ಸಿಂಹಗಳನ್ನು ನೋಡಿ ಶಕ್ತಿಸಿಂಹನು ಓಡಿಹೋದುದನ್ನೂ, ಮಂತ್ರಿ ದೇವಸಿಂಹನ ಬಳಿಗೆ ಸೇರಿದ್ದನ್ನೂ, ವೈದ್ಯನ ಪರಿಸ್ಥಿತಿ ಕಷ್ಟವಾದುದನ್ನೂ, ಪಕ್ಷಿರೂಪದಲ್ಲಿ ವೃದ್ಧೆಯ ದರ್ಶನವಾದುದನ್ನೂ, ದೇವಸಿಂಹನನ್ನು ಕುರಿತು ಅವರು ಯೋಚಿಸುವುದನ್ನೂ ಓದಿದ್ದೀರಲ್ಲವೆ? ಅನಂತರ—]

ಆಲಯದೊಳಗೆ ಹೊಕ್ಕ ವೃದ್ಧೆ ದೇವಸಿಂಹನನ್ನು ಅಲ್ಲಿ ಇಲ್ಲಿ ಹುಡುಕಿದಳು. ಅವನುಕಾಣದೆ ಹೋದುದರಿಂದ ಹೊರಗೆ ಬಂದಳು. ಅವಳು ಯಾವಾಗ ಹೊರಗೆ ಬರುವಳೋ ಎಂದು ಎದುರುನೋಡುತ್ತಾ ಕಾಯುತ್ತಿದ್ದ ಶಕ್ತಿಸಿಂಹನೂ ಆಸ್ಥಾನ ವೈದ್ಯನೂ, ಅವಳು ಹೊರಗೆ ಬಂದುದನ್ನು ನೋಡಿ ಅವಳ ಇದಿರಾಗಿ ನಡೆದರು. ಆದರೆ ವೃದ್ಧೆ ಅವರನ್ನು ಗಮನಿಸದೆಯೇ ಸಾಗಿಹೋದಳು. ಹೋಗುತ್ತಾ ಭೂಮಿಬಿಟ್ಟು ಆಕಾಶಕ್ಕೆ ಹಾರಿ ಹೋದಳು. ಅದನ್ನು ನೋಡಿ ಶಕ್ತಿಸಿಂಹನೂ ವೈದ್ಯನೂ ನಿಸ್ತಬ್ಧರಾದರು.

ನೆಲದಲ್ಲಿ ಒಂದುಕಡೆ ದೇವಸಿಂಹನೂ ಅವನೊಂದಿಗೆ ಮಂತ್ರಿಯೂ ಕೂಡಿರುವುದು ವೃದ್ಧೆಯ ಕಣ್ಣಿಗೆಬಿತ್ತು. ಕೂಡಲೇ ಅವಳು ಕೆಳಗಿಳಿದು ಬಂದು, ಮಂತ್ರಿಯಕಡೆಗೂ ದೇವಸಿಂಹನಕಡೆಗೂ ಟಕಮಕನೆ ನೋಡಿದಳು. ಆ ನೋಟದ ಅರ್ಥವನ್ನು ಮಂತ್ರಿ ಗ್ರಹಿಸಿಕೊಂಡನು.

ಆಗ ವೃದ್ಧೆ—"ನಾನು ಎಷ್ಟೋವಿಧವಾಗಿ ರಕ್ಷಿಸಬೇಕೆಂದು ಪ್ರಯತ್ನಪಟ್ಟರೂ ನಿಷ್ಫಲವಾಗಿ ಹೋಗುವುದನ್ನು ನೋಡಿ ಹೆದರಿದೆ. ಆ ಶಕ್ತಿಸಿಂಹನ ಕೈಗೆ ಈ ಹುಡುಗ ಸಿಕ್ಕಿಬಿಡುತ್ತಿದ್ದರೆ ಏನಾಗುತ್ತಿದ್ದನೋ? ಇವನನ್ನು ಹಿಡಿ



ಯಬೇಕೆಂದು ಅವನು ಎಲ್ಲಾ ಸ್ಥಳದಲ್ಲಿಯೂ ಹುಡುಕುತ್ತಿದ್ದಾನೆ. ಆದ್ದರಿಂದ ಜಾಗ್ರತೆಯಾಗಿರಬೇಕು. ಅದಕ್ಕೆ ಅಪೂರ್ವಸ್ತಂಭದ ಭವನಕ್ಕಿಂತ ಸುರಕ್ಷಿತವಾದ ಸ್ಥಳ ಬೇರೆಯಾವುದೂ ಇಲ್ಲ. ನನ್ನೊಂದಿಗೆ ಬನ್ನಿ. ನಿಮ್ಮನ್ನು ಅಲ್ಲಿಗೆ ಸೇರಿಸುವೆನು" ಎಂದಳು.

ಮಂತ್ರಿ ಆತುರದಿಂದ—"ಇನ್ನೂ ಹೀಗೆ ಎಷ್ಟುಕಾಲ? ನಮ್ಮೆಲ್ಲರ ತಾಯಿ ದೇವಪ್ರಿಯೆ ಏನಾದಳು? ಶಕ್ತಿಸಿಂಹನ ಸಂಗತಿಯನ್ನು ಹಾಗೋ ಹೀಗೋ ಖಂಡಿತಮಾಡಿ ಬಿಡುವುದು ಒಳ್ಳೆಯದಲ್ಲವೆ?" ಎಂದು ತನ್ನ ಅಭಿಪ್ರಾಯ ತಿಳಿಸಿದನು.

"ಅವಸರಪಡುವುದು ಒಳ್ಳೆಯದಲ್ಲ. ಅವನೇ ದಾರಿಗೆ ಬರುತ್ತಾನೆ. ಅದುವರೆಗೆ ನಾವು ಹುಡುಗನನ್ನು ರಕ್ಷಿಸಬೇಕು" ಎಂದಳು ಆ ವೃದ್ಧೆ.

ಮಂತ್ರಿಗೆ ಅವಳ ಮಾತನ್ನು ಅಲ್ಲಗಳೆಯಲಾಗಲಿಲ್ಲ. ಅವನೂ ದೇವಸಿಂಹನೂ ಆ ವೃದ್ಧೆಯೊಂದಿಗೆ ಹೊರಟರು.

ವೃದ್ಧೆ ತಮ್ಮನ್ನು ಲಕ್ಷ್ಯಮಾಡದೆ ಹೊರಟು ಹೋದಮೇಲೆ ಶಕ್ತಿಸಿಂಹನೂ ವೈದ್ಯನೂ ಅವಳು ತಿರುಗಿ ಬರುವಳೇನೋ ಎಂದು ನೋಡಿ ನೋಡಿ ನಿರಾಶೆಹೊಂದಿದರು. "ಇನ್ನು ಅವಳಿಗೋಸ್ಕರ ಎದುರು ನೋಡಿ ಪ್ರಯೋಜನವಿಲ್ಲ. ಅವಳನ್ನು ಹುಡುಕಲಿಕ್ಕೂ ಸಾಧ್ಯವಿಲ್ಲ. ಆದ್ದರಿಂದ ನಾನಿನ್ನು ಹೊರಟುಹೋಗುತ್ತೇನೆ. ನನ್ನನ್ನು ನನ್ನಷ್ಟಕ್ಕೆ ಹೋಗಲು ಬಿಟ್ಟುಬಿಡಿ. ಎಂದಿಗಾದರೂ ದೇವಸಿಂಹನನ್ನು ಹುಡುಕಿ ಹಿಡಿದು ಅವನ ರಾಜ್ಯವನ್ನು ಅವನಿಗೆ ಒಪ್ಪಿಸಿ ಪಟ್ಟಾಭಿಷೇಕಮಾಡಿಸುವ ಭಾರವು ನಿಮ್ಮದೇ" ಎನ್ನುತ್ತಾ ಶಕ್ತಿಸಿಂಹನು ಹೊರಡಲು ಸಿದ್ಧನಾಗಿ ವೈದ್ಯನ ಅನುಮತಿಯನ್ನು ಕೋರಿದನು.

ವೈದ್ಯನು ಎಷ್ಟೋವಿಧವಾಗಿ ಸಮಾಧಾನ ಹೇಳಿನೋಡಿದನು. 'ವೈರಾಗ್ಯ ತಾಳಬಾರದು, ನಿರುತ್ಸಾಹಪಡಬಾರದು' ಎಂದು ಎಷ್ಟೋ ಹೇಳಿದನು. ಆದರೆ ಶಕ್ತಿಸಿಂಹನು ತನ್ನ ದೃಢನಿಶ್ಚಯವನ್ನು ಬಿಡಲಿಲ್ಲ.

"ನನ್ನನ್ನು ಕ್ಷಮಿಸಿರಿ. ನಿಮ್ಮ ಕೋರಿಕೆಯಂತೆ ನಡೆಯಲು ಇನ್ನು ನನ್ನಿಂದಾಗದು. ಇನ್ನುಳಿದ ನನ್ನ ಆಯುಷ್ಯವು ನಿಶ್ಚಿಂತೆಯಿಂದ ಜರುಗಿಹೋಗುವಂತೆ ಆಶೀರ್ವದಿಸಿರಿ. ಅಷ್ಟೇ ಸಾಕು" ಎಂದು ಪ್ರಾರ್ಥನೆ ಮಾಡಿದನು ಶಕ್ತಿ

ಸಿಂಹ. ವೈದ್ಯನು ಇನ್ನೇನು ತಾನೇ ಮಾಡುವನು? ಮನಸಿಲ್ಲದ ಮನಸ್ಸಿನಿಂದ ಶಕ್ತಿಸಿಂಹನನ್ನು ಬೀಳ್ಕೊಟ್ಟು ಕಳಿಸಿದನು.

ವೈದ್ಯನು ಈಗ ಏಕಾಕಿಯಾದ. ಎಲ್ಲಿಗೆ ಹೋಗಬೇಕೋ ಏನುಮಾಡಬೇಕೋ ಒಂದೂ ಅವನಿಗೆ ತಿಳಿಯಲಿಲ್ಲ. ಎಲ್ಲಿಗೆ ಏನು ಎಂಬ ಯಾವ ಉದ್ದೇಶವೂ ಇಲ್ಲದೆ ಕಾಲು ಒಯ್ದತ್ತ ನಡೆಯಲಾರಂಭಿಸಿದನು.

* * *




**ಶ**ಕ್ತಿಸಿಂಹನಾದರೂ ಅಷ್ಟೇ, ಗೊತ್ತುಗುರಿ ಏನೂ ಇಲ್ಲದೆ ನಡೆಯುತ್ತಾ ಇದ್ದ. ಹೀಗೆ ನಡೆದು ನಡೆದು ಕೆಲವು ದಿನಗಳಿಗೆಲ್ಲಾ ಒಂದು ಮಹಾ ಅರಣ್ಯವನ್ನು ಸೇರಿಕೊಂಡನು: ನಿದ್ರೆ-ಆಹಾರ ಒಂದೂ ಇಲ್ಲದೆ ಸುಮ್ಮನೆ ನಡೆಯುತ್ತಾ ಆ ಕಾಡಿನ ಮಧ್ಯದಲ್ಲಿ ಪ್ರಜ್ಞೆತಪ್ಪಿ ಬಿದ್ದುಬಿಟ್ಟನು.

ಪ್ರಜ್ಞೆ ಬಂದು ಕಣ್ಣುತೆರೆದು ನೋಡಿದಾಗ, ಒಂದು ಸಣ್ಣ ಕುಟೀರದಲ್ಲಿ ಮಲಗಿರುವುದಾಗಿ ತಿಳಿದು ಕೊಂಡನು. ಅವನ ಪಕ್ಕದಲ್ಲಿಯೇ ಒಬ್ಬ ಹಣ್ಣುಹಣ್ಣು ಮುದುಕನು ಕುಳಿತಿದ್ದನು.

ಶಕ್ತಿಸಿಂಹನು ಕಣ್ಣುಬಿಡಿಸಿದ್ದು ನೋಡಿ ಆ ಮುದುಕನು, ತನ್ನ ಕಮಂಡಲುವಿನಿಂದ ಸ್ವಲ್ಪ ಜಲವನ್ನು ಆತನಿಗೆ ಕುಡಿಸಿದನು. ಅದರಿಂದ ಶಕ್ತಿಸಿಂಹನಿಗೆ ಇನ್ನಿಷ್ಟು ಬಲವು ಬಂದಿತು. ಎದ್ದುಕುಳಿತು—"ಸ್ವಾಮಿ, ತಾವುಯಾರೋ ನನ್ನನ್ನು ಕಾಪಾಡಲು ಬಂದ ದೇವದೂತರಂತಿರುವಿರಿ. ತಮ್ಮ ಈ ಕುಟೀರಕ್ಕೆ ನಾನು ಹೇಗೆ ಬಂದೆನು ಸ್ವಾಮಿ?" ಎಂದು ವಿನಯದಿಂದ ಕೇಳಿದನು.

ಅದಕ್ಕೆ ಆ ವೃದ್ಧನು—"ಆಪತ್ತಿನಲ್ಲಿರುವವರನ್ನು ಕಾಪಾಡುವುದು ಮನುಷ್ಯರ ಧರ್ಮ. ಈ ಅಡವಿಯಲ್ಲಿರುವ ಮೃಗಪಕ್ಷಿಗಳೇ ನನ್ನ ಒಡನಾಡಿಗಳು. ಈ ನಿರ್ಜನ ಪ್ರದೇಶದಲ್ಲಿ ನಿನ್ನಂತಹ ಆಪತ್ತಿಗೆ ಸಿಕ್ಕಿಬಿದ್ದವರ ಚರಿತ್ರೆ ಆ ಮೃಗಪಕ್ಷಿಗಳ ಮೂಲಕವಾಗಿ ನನಗೆ ತಿಳಿದುಬರುತ್ತದೆ. ಕೈಲಾದ ಸಹಾಯ ಮಾಡಿ ಕೃತಾರ್ಥನಾಗುತ್ತಿದ್ದೇನೆ. ಇರಲಿ ನೀವು ಯಾರೆಂದು ತಿಳಿಸಬಹುದೆ?" ಎಂದನು.

"ಸ್ವಾಮಿ, ನಾನೊಬ್ಬ ನಿರ್ಭಾಗ್ಯನು. ಸರಳ ಸ್ವಭಾವದ ಸಾಧುಸಜ್ಜನರನ್ನು ನಾನಾ ವಿಧವಾದ ಕಷ್ಟನಷ್ಟಗಳಿಗೆ ಪಾಲುಮಾಡಿ, ಈಗ ಅದರ ಫಲವನ್ನು ಅನುಭವಿಸುತ್ತಿದ್ದೇನೆ.




ಮಹಾ ಪಾಪಿ ನಾನು. ಮಹಾತ್ಮರನ್ನು ಸೇವಿಸುತ್ತಾ ಜೀವಿತಶೇಷವನ್ನು ಕಳೆಯಬೇಕೆಂದೇ ಹೀಗೆ ಹೊರಟಿದ್ದೇನೆ" ಎಂದು ಶಕ್ತಿಸಿಂಹನು ಉತ್ತರ ಹೇಳಿದನು.

ವೃದ್ಧನು ಬಹಳ ಕನಿಕರಪಟ್ಟು,— "ಏನೂ ಚಿಂತಿಸಬೇಡ. ನಿನಗೆ ನನ್ನಿಂದಾದಷ್ಟು ಸಹಾಯಮಾಡಲು ಯತ್ನಿಸುತ್ತೇನೆ" ಎಂದು ಅಭಯವಿತ್ತನು.

ಶಕ್ತಿಸಿಂಹನು ತನ್ನ ಜೀವಿತ ಚರಿತ್ರೆಯನ್ನೆಲ್ಲಾ ಏನೂ ಮುಚ್ಚುಮರೆ ಇಲ್ಲದೆ ಆ ಮಹಾತ್ಮನೊಡನೆ ನಿವೇದಿಸಿಕೊಂಡನು. ಆಗ ವೃದ್ಧನು—'ಪಾಪಮಾಡದ ಪ್ರಾಣಿ ಯಾರು? ಈ ಪ್ರಪಂಚದಲ್ಲಿ ಹುಟ್ಟಿದ ಪ್ರತಿ ಪ್ರಾಣಿಯೂ ಪಾಪಮಾಡುತ್ತಾ ಇರುತ್ತಾನೆ. ಆದರೆ ಮಾಡಿದ ಪಾಪಕ್ಕೆ ಪಶ್ಚಾತ್ತಾಪವೇ ತಕ್ಕ ಪ್ರಾಯಶ್ಚಿತ್ತವಾಗಿದೆ- ಈಗ ನೀನು ಅನುಭವಿಸುವ ಪಶ್ಚಾತ್ತಾಪವೇ ನಿನ್ನ ಪಾಪಗಳಿಗೆಲ್ಲಾ ಪರಿಹಾರವಾಯಿತು. ಆದುದರಿಂದ ಗತ ಸಂಗತಿಗಳನ್ನೆಲ್ಲಾ ಮರೆತು ನಿಮ್ಮ ಸೋದರಳಿಯನನ್ನು ಹುಡುಕಲಿಕ್ಕಾಗಿ ಪ್ರಯತ್ನಿಸು. ಅಲ್ಲದೆ ಪತ್ನಿಯನ್ನೂ ಮಕ್ಕಳನ್ನೂ ಹಾಗೆಬಿಟ್ಟು ನೀನು ಹೀಗೆ ಹೊರಟದ್ದೂ ನ್ಯಾಯಸಮ್ಮತವಲ್ಲ. ನಿನ್ನ ಮುಂದಿನ ಒಳ್ಳೆಯ ಪ್ರಯತ್ನವು ನಿರ್ವಿಘ್ನವಾಗಿ ನೇರವೇರುವಂತೆ ನಾನೊಂದು ಮಂತ್ರವನ್ನು ಉಪದೇಶಮಾಡುತ್ತೇನೆ. ಅದನ್ನು ಪಠಿಸುತ್ತಿರು" ಎಂದಂದು ಏನೋ ಒಂದು ಮಂತ್ರವನ್ನೂ ಉಪದೇಶ ಮಾಡಿದನು.

ಅನಂತರ ಶಕ್ತಿಸಿಂಹನು ದೇವಸಿಂಹನನ್ನು ಹುಡುಕುತ್ತಾ ಪುನಃ ಹೊರಟು ತಿರುಗಲಾರಂಭಿಸಿದನು- ಹಾಗೆ ತಿರುಗುತ್ತಾ ಅವನು ಕೆಲವು ದಿನಗಳಿಗೆಲ್ಲಾ ಒಂದು ರಾಜ್ಯವನ್ನು ಸೇರಿದನು. ಆ ನಗರದ ನಡು ಬೀದಿಯಲ್ಲಿ ಒಂದು ಹುಡುಗರ ಗುಂಪು ಕೂಡಿತ್ತು. ಶಕ್ತಿಸಿಂಹನು ಆ ಗುಂಪಿನ ಬಳಿಗೆಹೋಗಿ ನೋಡಿದನು. ಅಲ್ಲಿ ಒಬ್ಬ ಹುಚ್ಚನ ಸುತ್ತೂ ಅನೇಕ ಹುಡುಗರು ಸೇರಿ ಎಗತಾಳಿ ಮಾಡುತ್ತಿದ್ದರು.

ಶಕ್ತಿಸಿಂಹನು ಆ ಗುಂಪನ್ನೆಲ್ಲಾ ನಿವಾರಿಸಿ, ಆ ಹುಚ್ಚನನ್ನು ತನ್ನ ಜತೆಯಲ್ಲಿ ಕರೆದುಕೊಂಡು ಹೋದನು. ಆ ಹುಚ್ಚ ಆಗಾಗ— "ಎಲ್ಲಿ? ಆ ಮುದುಕಿ ಎಲ್ಲಿ? ಮುದುಕಿ ಚೂರು ಚೂರಾಗಿ ಹೋದಳೆ?' ಎನ್ನುತ್ತಿದ್ದ.

"ಯಾರು ಆ ಮುದುಕಿ?" ಎಂದು ಶಕ್ತಿ

ಸಿಂಹನು ಕೇಳಿನೋಡಿದನು. ಹುಚ್ಚನಿಂದ ಸರಿಯಾದ ಉತ್ತರ ಸಿಕ್ಕಲಿಲ್ಲ.

ಆ ಹುಚ್ಚನ ಚರಿತ್ರೆ ಶಕ್ತಿಸಿಂಹನಿಗೆ ತಿಳಿಯಲಿಲ್ಲ. ಹುಚ್ಚನು ಶಕ್ತಿಸಿಂಹನನ್ನು ಬಿಟ್ಟು ಹೋಗದೆ, ಅವನ ಜತೆಯಲ್ಲಿಯೇ ಇದ್ದನು. ಇಬ್ಬರೂ ಆ ರಾಜ್ಯವನ್ನು ಬಿಟ್ಟು, ಕೆಲವು ದಿನಗಳಮೇಲೆ ಯಾವುದೋ ಒಂದು ಗ್ರಾಮವನ್ನು ಸೇರಿಕೊಂಡರು. ಅಲ್ಲಿ ಒಂದು ಕೆರೆಯ ದಂಡೆಯಲ್ಲಿ ದೊಡ್ಡದೊಂದು ಜನರ ಗುಂಪು ತೋರಿತು.

ಅಲ್ಲಿ ಇಬ್ಬರು ಹುಡುಗರು ಚಮತ್ಕಾರವಾಗಿ ತಮ್ಮ ಗಾರುಡೀ ವಿದ್ಯೆಯನ್ನು ಪ್ರದರ್ಶಿಸುತ್ತಿದ್ದರು. ಕೆರೆಯದಂಡೆಯಲ್ಲಿ ಎರಡು ಬಿದಿರಿನ ಗಳುಗಳನ್ನು ನೆಟ್ಟು, ಅದರ ಮೇಲೊಂದು ಸರಿಗೆಯನ್ನು ಕಟ್ಟಿದ್ದರು. ಒಬ್ಬ ಹುಡುಗನು ಆ ಸರಿಗೆಯಮೇಲೆ ನಡೆಯುತ್ತಾ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ಹೋದನು. ಜನರೆಲ್ಲಾ ಸಂತೋಷವನ್ನು ತಾಳಲಾರದೆ ಚಟಚಟನೆ ಚಪ್ಪಾಳೆತಟ್ಟಿದರು.

ಆಗ ಶಕ್ತಿಸಿಂಹನೊಂದಿಗಿದ್ದ ಹುಚ್ಚನು ದೊಡ್ಡದಾಗಿ ನಗುತ್ತಾ, ಒಂದೇ ಉಸಿರಿಗೆ ಓಡಿಹೋಗಿ ಗಳುವಿನಮೇಲೆ ಏರಿದನು. ಸರಿಗೆಯನ್ನು ಹಿಡಿದು ಕೋತಿಯಂತೆ ನೇತಾಡಿದನು. ಇದನ್ನು ನೋಡಿ ಜನರು—"ಯಾರಿವನು? ಈಚೆಗೆ ಎಳೆಯಿರಿ" ಎಂದು ಕೂಗಿದರು. ಅಷ್ಟರೊಳಗೆ ಗಾರುಡಿ ತೋರಿಸುವ ಹುಡುಗರಲ್ಲೊಬ್ಬನು, ಆ ಹುಚ್ಚನ ಕಾಲನ್ನು ಹಿಡಿದು ಕೆಳಕ್ಕೆ ಎಳೆದುಬಿಟ್ಟನು.



ಅನಂತರ ಆ ಗಾರಡೀ ಹುಡುಗರು ತಮ್ಮ ವಿದ್ಯಾ ಪ್ರದರ್ಶನವನ್ನು ಮುಗಿಸಿ ಸುತ್ತೂ ನಿಂತ ಜನರ ಗುಂಪಿನಲ್ಲಿ ದುಡ್ಡು ಬೇಡಲಾರಂಭಿಸಿದರು. ಹೀಗೆ ಬೇಡುತ್ತಾ ಅವರು ಶಕ್ತಿಸಿಂಹನ ಬಳಿಗೂ ಬಂದರು. ಆಗ ಶಕ್ತಿಸಿಂಹನ ಕಣ್ಣಿನಿಂದ ದಳದಳನೆ ನೀರಿಳಿಯುತ್ತಿತ್ತು. ಅದನ್ನು ನೋಡಿ ಆ ಗಾರುಡೀ ಹುಡುಗರು ಆಶ್ಚರ್ಯಪಡುತ್ತ — "ಧರ್ಮ ಹಾಕಲಿಕ್ಕೆ ದುಡ್ಡಿಲ್ಲದಿದ್ದರೆ, ಹೀಗೆ ಅಳಬೇಕೆ?" ಎಂದುಕೊಂಡರು. ಏನೋ ಶಕ್ತಿಸಿಂಹನ ಮೇಲೆ ಅವರಿಗೆ ಕರುಣೆ ಹುಟ್ಟಿತು.

"ಸರಿ. ನಿನ್ನಬಾಧೆ ಏನೋ ನಾವು ಗ್ರಹಿಸಿಕೊಂಡೆವು. ನೀನೂ ನಮ್ಮೊಂದಿಗೆ ಬಾ. ನಾವು ಸಂಪಾದಿಸುವುದರಲ್ಲಿಯೇ ನಿನಗೂ ಗಂಜಿಯೋ ಕೂಳೋ ಹಾಕುತ್ತೇವೆ" ಎಂದರು ಆ ಹುಡುಗರು. ಅದಕ್ಕೆ ಶಕ್ತಿಸಿಂಹನು "ನಾನೊ

ಬ್ಬನೇ ಅಲ್ಲ; ಈ ಹುಚ್ಚನನ್ನೂ ಪೋಷಣೆ ಮಾಡಬೇಕು. ಅದು ನಿಮ್ಮಿಂದಾಗದು. ನಮ್ಮನ್ನು ನಮ್ಮಷ್ಟಕ್ಕೆ ಬಿಡಿರಿ' ಎಂದು ಗದ್ಗದ ಕಂಠದಿಂದ ಶಕ್ತಿಸಿಂಹನೆಂದ.

ಇದನ್ನು ಕೇಳಿ ಆ ಹುಡುಗರ ಹೃದಯವು ಇನ್ನಷ್ಟು ಕರಗಿತು. "ಚಿಂತೆಯಿಲ್ಲ. ನೀವಿಬ್ಬರೂ ನಮ್ಮೊಂದಿಗೆ ಬನ್ನಿ. ನಮ್ಮ ವಿದ್ಯೆಯನ್ನು ನಿಮಗೂ ಕಲಿಸುತ್ತೇವೆ. ಕೊಂಚ ದಿನ ಹೋದರೆ ನೀವೇ ನಮ್ಮನ್ನು ಪೋಷಣೆ ಮಾಡುತ್ತೀರಿ" ಎಂದು ಸಮಾಧಾನಪಡಿಸಿ, ಅವರಿಬ್ಬರನ್ನೂ ತಮ್ಮೊಂದಿಗೆ ಕರೆದುಕೊಂಡು ಇನ್ನೊಂದು ಗ್ರಾಮಕ್ಕೆ ಹೊರಟರು. ಗಾರುಡೀ ವಿದ್ಯೆಯನ್ನು ಶಕ್ತಿಸಿಂಹನೂ ಕಲಿಯಲಾರಂಭಿಸಿದನು.

* * *

ಅತ್ತ ಆಸ್ಥಾನ ವೈದ್ಯನು ಏಕಾಂಗಿಯಾಗಿ ನಡೆಯುತ್ತಾ ಎಷ್ಟೋ ರಾಜ್ಯಗಳನ್ನು ದಾಟುತ್ತಾ ಇದ್ದನು. ಆದರೆ ಎಲ್ಲಿಯೂ ಮಂತ್ರಿಯ ಜಾಡೆಯಾಗಲೀ ದೇವಸಿಂಹನ ಜಾಡೆಯಾಗಲೀ ಅವನಿಗೆ ಸಿಕ್ಕಲೇ ಇಲ್ಲ.

ಆದರೆ ಒಂದಾನೊಂದುದಿನ ಅವನು ಶಕ್ತಿಸಿಂಹನ ಪರಿವಾರವನ್ನು ಸಂಧಿಸುವಂತಾಯಿತು. ಈಗ ಶಕ್ತಿಸಿಂಹನ ಅವತಾರವು ಸಂಪೂರ್ಣ ಬದಲಾಗಿತ್ತು. ಅವನು ಈಗ ಒಬ್ಬ ಗಾರುಡಿಗಾರನ ವೇಷದಲ್ಲಿ ಒಪ್ಪುತ್ತಿದ್ದ. ವೈದ್ಯನಿಗೆ ಅವನ ಗುರುತೇ ಸಿಕ್ಕಲಿಲ್ಲ. ಆದರೆ ಶಕ್ತಿಸಿಂಹನು ವೈದ್ಯನ ಗುರುತು ಹಿಡಿದುಬಿಟ್ಟನು.

"ತಾವು ಇಲ್ಲಿಗೆ ಹೇಗೆಬಂದಿರಿ? ಏನಾದರೂ ಜಾಡೆತಿಳಿಯಿತೆ?" ಎಂದು ವೈದ್ಯನನ್ನು ಕುರಿತು ಶಕ್ತಿಸಿಂಹನು ಪ್ರಶ್ನೆಮಾಡಿದನು. ವೈದ್ಯನು ಏನೂ ಉತ್ತರ ಕೊಡದೆ ಖಿನ್ನನಾಗಿ ನಿಂತನು. ಅದರಭಾವ ಶಕ್ತಿಸಿಂಹನಿಗೆ ಗೊತ್ತಾಯಿತು. ಅವನು ತನ್ನೊಂದಿಗಿರುವ ಹುಡುಗರನ್ನು ವೈದ್ಯನಿಗೆ ಪರಿಚಯ ಮಾಡಿಸುತ್ತ–"ದಿಕ್ಕುದೆಶೆಯಿಲ್ಲದೆ, ಹರಿದುಹೋದ ಗಾಳೀಪಟದಂತೆ ತಿರುಗುತ್ತಿದ್ದ ನನಗೆ, ಈ ಹುಡುಗರು ಆಶ್ರಯವಿತ್ತು ಕಾಪಾಡಿದರು. ಇಲ್ಲದಿದ್ದರೆ ನನ್ನಪ್ರಾಣವು ಎಂದೋ ಹೋಗಿರುತ್ತಿತ್ತು! ಇರಲಿ. ಇನ್ನು ನೀವು ಒಬ್ಬರಾಗಿ ಎಲ್ಲೆಂದು ಕಾಲಕ್ಷೇಪಮಾಡುವಿರಿ? ನಮ್ಮೊಂದಿಗೆ ಬಂದುಬಿಡಿ" ಎಂದು ಕೋರಿಕೊಂಡನು.

ಸಾಧ್ಯವಿಲ್ಲವೆಂದು ಹೇಳಿ ವೈದ್ಯನಿಗೆ ಏನಾಗ ಬೇಕಾಗಿದೆ? 'ಸರಿ' ಎಂದು ಒಪ್ಪಿಬಿಟ್ಟನು. ಹೀಗೆ ಅವನು ಶಕ್ತಿಸಿಂಹನ ಪರಿವಾರದೊಂದಿಗೆ ಅವರು ಹೋದಲ್ಲಿಗೆ ಹೋಗುತ್ತ ಅವರ ಜತೆಯಲ್ಲಿಯೇ ಇದ್ದನು.

ಈ ಪರಿವಾರದವರು ಎಷ್ಟೋದೇಶಗಳಿಗೆ ಪ್ರಯಾಣಮಾಡುತ್ತ ಅಪೂರ್ವಸ್ತಂಭ ಮಂದಿರದ ಹತ್ತಿರ ಹತ್ತಿರಕ್ಕೆ ಬಂದರು. ಅದು ಈ ಮೊದಲೇ ಅವರಿಗೆ ಪರಿಚಯವಾದ ಸ್ಥಳವೇ ಆದ.ದರಿಂದ ಆ ಭವನವು ಕಣ್ಣಿಗೆ ಬೀಳುತ್ತಲೇ ವೈದ್ಯನು ಅತ್ಯಾನಂದಪಟ್ಟನು. ಆ ಭವನದ ಮುಂದೆಯೇ ಗಾರುಡೀ ಪ್ರದರ್ಶನಕ್ಕೆ ಏರ್ಪಾಡು ಮಾಡಿಕೊಡರು.

ಇವರ ಗದ್ದಲದಿಂದ ಒಳಗಿದ್ದ ಮಂತ್ರಿಯೂ ದೇವಸಿಂಹನೂ ಬಳಗೆಕೆಗ್ಗಿ ನೋಡಿದರು. ಗಾರುಡಿಯವರ ವಿಚಿತ್ರ ವಿದ್ಯೆಗಳನ್ನು ನೋಡಿ ದೇವಸಿಂಹನು ಅತ್ಯಾನಂದಪಡುತ್ತ, ಕೆಳಕ್ಕೆ ಹೋಗಬೇಕೆಂದು ಪಟ್ಟುಹಿಡಿದನು. ಮಂತ್ರಿ ಅವನನ್ನು ಎತ್ತಿಕೊಂಡು ಕೆಳಕ್ಕೆ ಬಂದನು.

ಪ್ರದರ್ಶನ ಕಾರ್ಯದಲ್ಲಿ ಮುಳುಗಿ ಹೋಗಿದ್ದ ಗಾರುಡೀ ಹುಡುಗರು ಮೊದಲು ದೇವಸಿಂಹನಕಡೆಗೆ ನೋಡಲೇ ಇಲ್ಲ. ಮತ್ತೆ ಸ್ವಲ್ಪ ಹೊತ್ತಿನಮೇಲೆ ದೇವಸಿಂಹನು ಅವರಕಣ್ಣಿಗೆ ಬೀಳುತ್ತಲೇ ಪ್ರದರ್ಶನವನ್ನು ನಿಲ್ಲಿಸಿ ಒಮ್ಮೆಗೇ ದೇವಸಿಂಹನ ಬಳಿಗೆ ಓಡಿಬಂದರು. "ಯಾರು? ನಮ್ಮ ದೇವಸಿಂಹನೇ!" ಎನ್ನುತ್ತಾ ಅವನನ್ನು ಸುತ್ತಿಕೊಂಡರು.

ಆ ಹುಡುಗರು ದೇವಸಿಂಹನನ್ನು ಶಕ್ತಿ



ಸಿಂಹನಿಗೆ ತೋರಿಸುತ್ತ — "ನಮ್ಮ ತಂದೆ ಈ ರಾಜಕುಮಾರನ ಪ್ರಾಣವನ್ನು ಬಲಿತಕ್ಕೊಂಡರೆಂದು ರಾಜ್ಯದೊಳಗೆಲ್ಲರೂ ಹೇಳಿಕೊಳ್ಳುತ್ತಿದ್ದರು. ತಿಳಿದು ಮಾಡಿದರೋ ತಿಳಿಯದೆ ಮಾಡಿದರೋ ನಮ್ಮ ತಂದೆ! ಅವರು ಹೀಗೊಂದು ಕೆಟ್ಟ ಹೆಸರಿಗೆ ಪಾತ್ರರಾಗಿ...." ಎಂದು ಅನ್ನುತ್ತಿದ್ದಾಗ ಶಕ್ತಿಸಿಂಹನು ಪ್ರಜ್ಞೆ ತಪ್ಪಿ ನೆಲದಲ್ಲಿ ಬಿದ್ದನು.

ಕೊಂಚಹೊತ್ತಿಗೆಲ್ಲಾ ಶಕ್ತಿಸಿಂಹನಿಗೆ ಎಚ್ಚರವಾಯಿತು. ತನ್ನನ್ನು ಇಷ್ಟುದಿವಸ ಕಾಪಾಡುತ್ತಿದ್ದವರು ತನ್ನ ಕುಮಾರರೇ ಎಂದೂ, ಆ ಹುಚ್ಚನು ತನ್ನ ಸೋದರಳಿಯನೇ ಎಂದೂ ಈಗ ಅವನಿಗೆ ಸ್ಪಷ್ಟವಾಗಿ ತಿಳಿದು ಬಂತು.

ಅಷ್ಟರಲ್ಲಿ ಎಲ್ಲಿಂದಲೋ ಆ ಮಾಯದವೃದ್ಧೆ ಬಂದೇ ಬಂದಳು. ಎಲ್ಲಾ ಪರಿಸ್ಥಿತಿಯನ್ನೂ

ಗ್ರಹಿಸಿಬಿಟ್ಟಿದ್ದಳವಳು. ಅವಳು ಶಕ್ತಿಸಿಂಹನನ್ನು ತನ್ನಬಳಿಗೆ ಕರೆದು—"ಇನ್ನು ನೀವು ನಿಮ್ಮರಾಜ್ಯಕ್ಕೆ ಹೋಗಿರಿ. ಪಟ್ಟಾಭಿಷೇಕಕ್ಕೆ ಎಲ್ಲಾ ಏರ್ಪಾಡುಮಾಡಿರಿ. ದೇವಸಿಂಹನೊಂದಿಗೆ ನಾನೂ ಬಂದುಸೇರುತ್ತೇನೆ" ಎಂದಳು.

ಆದರೆ ದೇವಸಿಂಹನಿಗೆ ಹೋಗಲಿಕ್ಕೆ ಇಷ್ಟವಿರಲಿಲ್ಲ. "ನನ್ನನ್ನು ಇಲ್ಲಿಯೇ ಇರಗೊಡಿಸಿರಿ. ನನಗೆ ಬದಲಾಗಿ ಈ ಹುಡುಗರಲ್ಲಿ ಯಾರಿಗಾದರೂ ಪಟ್ಟಕಟ್ಟಿರಿ. ಇಷ್ಟುಕಾಲವೂ ಪ್ರಜೆಗಳನ್ನು ನೋಡದೆ ಮಾತಾಡದೆ ಕಾಪಾಡದೆ ಅಜ್ಞಾತವಾಸದಲ್ಲಿದ್ದು ಈಗ ಹೋಗಿ ರಾಜನಾಗಿ ಪ್ರಜೆಗಳಮೇಲೆ ಅಧಿಕಾರ ನಡೆಸಲು ನನ್ನಿಂದಾಗದು. ಅಲ್ಲದೆ ನಾನು ಓಡಾಡಲಾರದ ಕುಂಟನಾಗಿಯೂ ಇದ್ದೇನೆ" ಎಂದನು ದೇವಸಿಂಹ.

ಶಕ್ತಿಸಿಂಹನೂ ವೈದ್ಯನೂ ಶಕ್ತಿಸಿಂಹನ ಕುಮಾರರೂ ಎಷ್ಟೇ ಒತ್ತಾಯ ಮಾಡಿದರೂ ದೇವಸಿಂಹನು ಕೇಳಲಿಲ್ಲ. ಇದನ್ನು ನೋಡಿ ಆ ವೃದ್ಧೆ—"ಬಲವಂತದಿಂದ ರಾಜ್ಯಭಾರವನ್ನು ನೆತ್ತಿಯಮೇಲಿಟ್ಟು ಏನೂ ಪ್ರಯೋಜನವಿಲ್ಲ. ಆದ್ದರಿಂದ ದೇವಸಿಂಹನು ಹೇಳಿದಂತೆ ಈ ಹುಡುಗರಿಗೇ ಪಟ್ಟಾಭಿಷೇಕ ಮಾಡಿರಿ. ಹೋಗಿಬನ್ನಿ" ಎಂದಳು.

ಯಾರೂ ಒಪ್ಪಲಿಲ್ಲ. ಆಗ ಶಕ್ತಿಸಿಂಹನ ಕುಮಾರರು—"ನಮ್ಮ ವಂಶದಲ್ಲಿ ಉಳಿದವರೆಲ್ಲಾ ಇಲ್ಲಿಯೇ ಇದ್ದೇವೆ. ರಾಜರಾಗಿ ಮೆರೆಯಬೇಕೆಂದು ನಮಗೂ ಆಕಾಂಕ್ಷೆ ಇಲ್ಲ. ನಿನ್ನೊಂದಿಗೆ ನಾವೂ ಈ ಭವನದಲ್ಲಿಯೇ ಇರುವಂತೆ ಅನುಮತಿಕೊಡು" ಎಂದರು.

ವೃದ್ಧೆ ಒಪ್ಪಿದಳು. ದೇವಸಿಂಹನೊಂದಿಗೆ ಶಕ್ತಿಸಿಂಹನೂ, ವೈದ್ಯನೂ, ಮಂತ್ರಿಯೂ, ಮತ್ತು ಶಕ್ತಿಸಿಂಹನ ಕುಮಾರರೂ ಆ ಅಪೂರ್ವಸ್ತಂಭ ಮಂದಿರದೊಳಗೇ ವಾಸಮಾಡತೊಡಗಿದರು. ಇದುವರೆಗೆ ದೇವಸಿಂಹನೊಬ್ಬನಿಗಾಗಿಯೇ ಕಟಿಸಲ್ಪಟ್ಟ ಆ ಭವನವು ಈಗ ಎಲ್ಲರ ಸೌಕರ್ಯಕ್ಕೂ ತಕ್ಕಹಾಗೆ ಏರ್ಪಡಿಸಲಾಯಿತು. ಅಲ್ಲಿ ಒಬ್ಬರಿಗೊಬ್ಬರು ಒತ್ತಾಸೆಯಾಗಿ ಸುಖವಾಗಿದ್ದರು.

ಈ ರೀತಿಯಾಗಿ ನಾಥರಿಲ್ಲದ ಆ ರಾಜ್ಯವು 'ಅನಾಥರಾಜ್ಯ' ವಾಗಿಯೇ ಉಳಿದು ಹೋಯಿತು. (ಮುಗಿಯಿತು)



# ಕವಿಪೂಜೆ



M.T.V. Acharya

ಅನೇಕ ವರ್ಷಗಳಕೆಳಗೆ ಪರ್ಷಿಯಾದೇಶದಲ್ಲಿ ಒಬ್ಬ ಮಹಾಕವಿ ಇದ್ದನು. ಅವನ ಹೆಸರು 'ಫಿರದೌಸಿ' ಈತನು ರಚಿಸಿದ ಮಹಾಗ್ರಂಥದ ಹೆಸರು 'ಷಾನಾಮಾ' ಆ ಗ್ರಂಥವನ್ನು ರಚಿಸಲು ಅವನಿಗೆ ಒಂದಲ್ಲ, ಎರಡಲ್ಲ, ಮೂವತ್ತು ವರ್ಷಗಳು ಬೇಕಾದುವು. ಅಷ್ಟು ದೀರ್ಘಕಾಲ ಕಷ್ಟಪಟ್ಟು ಆ ಮಹಾ ಗ್ರಂಥವನ್ನು ಬರೆದು ಮುಗಿಸಿದ್ದನು.

ಆ ಗ್ರಂಥವು ಪಾರಸೀಕ ಚಕ್ರವರ್ತಿಗಳ ಚರಿತ್ರೆಯನ್ನು ಲೋಕಚರಿತ್ರೆಯೊಂದಿಗೆ ಹೊಂದಿಸಿ ರಚನೆಮಾಡಿದ ಮಹಾಕಾವ್ಯವಾಗಿತ್ತು. ಅದರಲ್ಲಿ ಫಿರದೌಸಿ ತನ್ನ ಕವಿತಾ ಪ್ರತಿಭೆಯನ್ನೆಲ್ಲಾ ಬಹುಚೆನ್ನಾಗಿ ಬೆಳಗುವಂತೆ ರಚಿಸಿದ್ದ. 'ಷಾನಾಮಾ'ದಲ್ಲಿ ಅರುವತ್ತು ಸಾವಿರ ಪದ್ಯಗಳುಂಟು! ಪದ್ಯಗಳೆಲ್ಲಾ ಒಂದನ್ನೊಂದು ಮಿಂಚಿಕೊಂಡು ಒಪ್ಪುತ್ತಿದ್ದುವು.

ಬಾಳುವೆಯಲ್ಲಿ ಕಷ್ಟಪಡುವ ಪ್ರತಿ ಪ್ರಾಣಿಗೂ 'ಷಾನಾಮಾ' ಒಳ್ಳೊಳ್ಳೆಯ ಸಂದೇಶವನ್ನು ಕೊಡುತ್ತಿತ್ತು. ಪ್ರತಿಯೊಂದು ಸಂದೇಹಕ್ಕೂ ಅದರಲ್ಲಿ ಉತ್ತರ ಸಿಗುತ್ತಿತ್ತು. ಅಂತಹ ಶಕ್ತಿಯುಳ್ಳ ಗ್ರಂಥವು ಬೇರೊಂದಿಲ್ಲವೆಂದರೂ ಅತಿಶಯೋಕ್ತಿಯಲ್ಲ.

ಇಂತಹದೊಂದು ಗ್ರಂಥವನ್ನು ಬರೆಯಬೇಕೆಂದು ಫಿರದೌಸಿ ಸಂಕಲ್ಪಿಸಿಕೊಂಡಾಗ, ಬಾದಷಹನಾದ ಘಜನೀಮಹಮ್ಮದನು 'ಈ ಮಹಾ ಗ್ರಂಥವನ್ನು ಪೂರ್ತಿಮಾಡಿಕೊಟ್ಟರೆ, ಅದರಲ್ಲಿಯ ಒಂದೊಂದು ಪದ್ಯಕ್ಕೆ ಒಂದೊಂದು ಬಂಗಾರದ ದಿನಾರವನ್ನು 'ಖುರಾಸ್ ಸಾಕ್ಷಿಯಾಗಿ ಬಹುಮಾನ ಕೊಡುವೆ' ನೆಂದು ಹೇಳಿ, ಆ ಮಹಾ ಕವಿಯನ್ನು ಎಷ್ಟೋ ಪ್ರೋತ್ಸಾಹ ಪಡಿಸಿದನು.

ಬಾದಷಹನ ಮಾತಿನಮೇಲೆ ದೃಢನಂಬುಗೆಯಿಟ್ಟು, ಬಹಳ ಉತ್ಸಾಹದಿಂದ ಗ್ರಂಥರಚನೆಗೆ ತೊಡಗಿದನು ಫಿರದೌಸಿ. ರಾತ್ರಿಯೆನ್ನದೆ, ಹಗಲೆನ್ನದೆ, ವೇಳೆ ವೇಳೆಗೆ ನಿದ್ರಾಹಾರಗಳಿಲ್ಲದೆ, ಮೂವತ್ತು ವರ್ಷ ಶ್ರಮಪಟ್ಟು 'ಷಾನಾಮಾ' ಕಾವ್ಯವನ್ನು ಪೂರ್ತಿಮಾಡಿದನು

ಆಗ ಆ ಕವಿಶ್ರೇಷ್ಠನಿಗೆ ಇದ್ದುದೆಲ್ಲ ಒಂದೇ ಒಂದು ಉದ್ದೇಶ, ಆಶೆ. ತನ್ನ ಒಬ್ಬಳೇ

ಯು. ರಘುಪತಿ ಆಚಾರ್ - ಶಿರ್ವ




ಒಬ್ಬಳು ಮಗಳಿಗೆ ದೊಡ್ಡ ಸಂಬಂಧವನ್ನು ಆರಿಸಿ, ಬಹಳ ವೈಭವದಿಂದ ಮದುವೆಮಾಡಿ ಬಿಡಬೇಕೆಂದೇ ಅವನ ಹಿರಿಯಾಸೆ. ಬಾದಷಹನು ಕೊಡುವ ದೊಡ್ಡ ಬಹುಮಾನದಿಂದ ತನ್ನ ಕೋರಿಕೆಯನ್ನು ಈಡೇರಿಸಿಕೊಳ್ಳಬಹುದೆಂದು ಅವನು ದೃಢವಾಗಿ ನಂಬಿದ್ದನು. ಈ ನಂಬುಗೆಯಿಂದಲೇ ಅವನು ದೀಕ್ಷೆವಹಿಸಿ 'ಷಾನಾಮಾ'ವನ್ನು ಬರೆದು ಮುಗಿಸಲು ಶಕ್ತನಾದನು. ಮತ್ತು ವಿಜಯೋತ್ಸಾಹದಿಂದ ಆ ಗ್ರಂಥರಾಜವನ್ನು ಬಾದಷಹನಿಗೆ ಸಮರ್ಪಣೆಮಾಡಿದನು. ಆದರೆ, ಏನಾಯಿತು ಗೊತ್ತೆ?

ಫಿರದೌಸಿಯ ಪ್ರತಿಭೆಯನ್ನು ನೋಡಿ ಅಸೂಯೆಪಡುವ ಕೆಲವು ದುಷ್ಟರೂ ರಾಜಧಾನಿಯಲ್ಲಿ ದೊಡ್ಡ ದೊಡ್ಡ ಅಧಿಕಾರದಲ್ಲಿದ್ದರು. ಅಂತಹರು ಕೆಲವರು ಬಾದಷಹನ ಕಿವಿಯಲ್ಲಿ ಲೋಭವನ್ನು ತುಂಬಿದರು. ಅದರಿಂದ ಘಜನೀ ಮಹಮ್ಮದನ ಹೃದಯವು ಗಟ್ಟಿಯಾಯಿತು. ಅವನನ್ನು ಕೇಳುವರಾರು? ಬಹುಮಾನವನ್ನು ಕಳುಹಿಸುವೆನೆಂದು ಹೇಳಿ ಫಿರದೌಸಿಯನ್ನು ಕಳುಹಿಸಿದನು. ಬಳಿಕ ಬಂಗಾರದನಾಣ್ಯಗಳ ಬದಲಿಗೆ ಬೆಳ್ಳಿಯನಾಣ್ಯಗಳ ಮೂಟೆಗಳನ್ನು ಒಂಟೆಗಳಮೇಲೆ ಹೇರಿಸಿ ಫಿರದೌಸಿಗೆ ಕಾಣಿಕೆಯಾಗಿ ಕಳುಹಿಸಿದನು.

ಅದನ್ನು ನೋಡಿ ಫಿರದೌಸಿ ಕುಸಿದು ಬಿದ್ದನು. ಅವನಕಷ್ಟವೆಲ್ಲಾ ಅಡವಿಯಬೆಳುದಿಂಗಳಂತಾಯಿತು. ಅವನು ಮೂವತ್ತು ವರ್ಷಗಳಿಂದ 'ಷಾನಾಮಾ' ಮೂಲಕವಾಗಿ ಹೇಳಿದ ಜ್ಞಾನಬೋಧೆಗಳೆಲ್ಲಾ ಅವನಿಗೆ ಮರೆತು ಹೋದುವು. ಉದ್ರಿಕ್ತನಾಗಿ ಬಾದಷಹನನ್ನು ಶಪಿಸಿದನು. ಆದರೂ ಆವೇಶವು ತೀರದೆ, ಮೂಟೆಗಳನ್ನು ಹೇರಿಕೊಂಡು ಸಾಲಾಗಿ ನಿಂತಿದ್ದ ಒಂಟೆಗಳನ್ನು ಬಯಲಿಗೆ ಓಡಿಸಿದನು. ಮೂಟೆಯ ಹಗ್ಗಗಳನ್ನು ಚರಚರನೆ ಕೊಯ್ದನು. ಅದರೊಳಗಿದ್ದ ಬೆಳ್ಳಿಯ ನಾಣ್ಯಗಳೆಲ್ಲಾ ಜಲಜಲನೆ ನೆಲದಲ್ಲಿ ಬಿದ್ದುವು. ಮತ್ತೆ ಒಂದು ನಿಮಿಷವೂ ತಾಳದೆ, ಯಾರಿಗೂ ತಿಳಿಸದೆ, ಫಿರದೌಸಿ ಪರದೇಶಕ್ಕೆ ಪಲಾಯನ ಮಾಡಿ, ಅಲ್ಲಿ ಜೀವಚ್ಛವದಂತೆ ಕಾಲಹರಣ ಮಾಡುತ್ತಿದ್ದನು.

ಅನಂತರ ಒಂದುದಿನ ಘಜನೀಮಹಮ್ಮದನಿಗೂ ಬೇರೊಬ್ಬ ಸುಲ್ತಾನನಿಗೂ ಮಧ್ಯೆ ಜಗ

ಳವು ಪ್ರಾಪ್ತವಾಯಿತು. ಘೋರ ಯುದ್ಧವು ತೊಡಗಿತು. ಈ ಯುದ್ಧದಲ್ಲಿ ಘಜನೀಮಹಮ್ಮದನು ಸೋತುಹೋಗುವ ಸೂಚನೆ ತೋರಿಬಂತು. ಬಾದಷಹನು ಬಹಳ ಚಿಂತೆಯಿಂದ ಏನೂ ಉಪಾಯಗಾಣದೆ ಮಂತ್ರಿಯೊಡನೆ ಸಲಹೆ ಕೇಳಿದನು. ಆಗ ಮಂತ್ರಿ ತನ್ನ ಜೇಬಿನಿಂದ ಒಂದು ಗ್ರಂಥವನ್ನು ತೆಗೆದು ಅದರದೊಂದು ಪದ್ಯವನ್ನು ಓದಿದನು :

"ರಣರಂಗದಿಂದ ಹಿಂದಿರುಗಬೇಡ,
ಶತ್ರುದಾಳಿಗೆ ಕಾದು ನಿಲ್ಲಬೇಡ.
ಧೈರ್ಯದಿಂ ನೀನೆ ಮುನ್ನುಗ್ಗಿ ನೋಡ,
ವಿಜಯ ನಿನಗೇ ಸಿದ್ಧ, ಸಂದೇಹಬೇಡ."




ಎಂದು ಮಂತ್ರಿ ಓದುತ್ತಲೇ, ಬಾದಷಹನಿಗೆ ಹೊಸ ಉತ್ಸಾಹದಿಂದ ಜೀವಕಳೆ ಬಂತು. ಇದ್ದ ಸೈನ್ಯವನ್ನೆಲ್ಲ ಬೇಗಬೇಗನೇ ಸಿದ್ಧಮಾಡಿಸಿ, ರಭಸದಿಂದ ಶತ್ರುಗಳಮೇಲೆ ಬಿದ್ದನು.

ಸೋಲುವಂತಿದ್ದವನು ಅಕಸ್ಮಾತ್ ಹೀಗೆ ದಾಳಿ ತೆಗೆದುದರಿಂದ ಅವನ ಶತ್ರುಗಳು ಕಂಗಾಲಾದರು. ಅವರು ಯುದ್ಧಕ್ಕೆ ಸಿದ್ಧರಾಗಿಯೂ ಇರಲಿಲ್ಲ. ಹೊತ್ತಾದರೋ ಮಟಮಧ್ಯಾಹ್ನ. ಸೈನಿಕರೆಲ್ಲಾ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ಸಮಯ. ತಮಗೇ ವಿಜಯವೆಂಬ ನಂಬುಗೆಬೇರೆ ಅವರಿಗೆ ಬಂದುಬಿಟ್ಟಿತ್ತು. ಈ ಸಮಯದಲ್ಲಿಯೇ ಮಹಮ್ಮದನ ಸೈನ್ಯವು ಮುತ್ತಿಬಿಟ್ಟುದರಿಂದ, ಶತ್ರುಗಳೆಲ್ಲಾ ಸೋತು ಓಡಿಹೋದರು. ನಮ್ಮ ಬಾದಷಹನಿಗೇ ವಿಜಯವಾಯಿತು.

ಬಾದಷಹನು ಬಹಳ ಆನಂದದಿಂದ ಮಂತ್ರಿಯನ್ನು ಕರೆದು,—'ಮಂತ್ರಿ, ನೀನು ಜೇಬಿನಿಂದ ಒಂದು ಪುಸ್ತಕವನ್ನು ತೆಗೆದು ಓದಿ ಹೇಳಿದಿಯಲ್ಲಾ? ಅದು ಯಾವ ಪುಸ್ತಕದ ಪದ್ಯ?" ಎಂದು ಆತ್ಯಾತುರದಿಂದ ಕೇಳಿದನು.

ಅದಕ್ಕೆ ಮಂತ್ರಿ—"ಅದೊ? ತಮ್ಮಿಂದ ಯಾವ ಮಹಾಕವಿಯು ಪಲಾಯನಕ್ಕೆ ಕಾರಣವಾಯಿತೋ, ಆ ಕವಿಸಾರ್ವಭೌಮ ಫಿರದೌಸಿಯ ಷಾನಾಮಾ ಗ್ರಂಥದೊಳಗಿನ ಪದ್ಯವದು!" ಎಂದು ಧೈರ್ಯದಿಂದ ಹೇಳಿದನು.

ಬಾದಷಹನು ನಿಸ್ತಬ್ಧನಾದನು! ಆ ಮಹಾಕವಿಗೆ ತಾನುಮಾಡಿದ ದ್ರೋಹವನ್ನು ನೆನೆದು ತನ್ನೊಳಗೆ ತಾನೇ ತುಂಬಾ ನಾಚಿ

ಕೊಂಡನು. ಆತನು ತುಂಬಾ ಪಶ್ಚಾತ್ತಾಪ ಪಟ್ಟು, ತಾನು ವಾಗ್ದಾನಮಾಡಿದಂತೆ ಅರುವತ್ತು ಸಾವಿರ ಬಂಗಾರದ ದಿನಾರಗಳನ್ನು ಸಾಗಿಸಿಕೊಂಡು ಹೋಗಿ, ಆ ಕವಿಚಂದ್ರನನ್ನು ಹುಡುಕಿ, ಅವನಿಗೆ ಸಮರ್ಪಿಸಿ ಬರಬೇಕೆಂದು ಮಂತ್ರಿಗೆ ಆಜ್ಞಾಪಿಸಿದನು. ಅದರಂತೆಯೇ ಮಂತ್ರಿ ಐವತ್ತು ಒಂಟೆಗಳಮೇಲೆ ದಿನಾರಗಳ ಸಂಚಿಗಳನ್ನು ಹೇರಿಸಿಕೊಂಡು ಪ್ರಯಾಣ ಹೊರಟನು. ಹುಡುಕುತ್ತಾ ಅವನು ಫಿರದೌಸಿ ವಾಸವಾಗಿರುವ ಸ್ಥಳವನ್ನು ಮುಟ್ಟಿದಾಗ ಸಮಯಮೀರಿ ಹೋಗಿತ್ತು!

ಆಗಲೇ ಒಂದು ವರ್ಷದಿಂದ ದಿನೇದಿನೇ ಸೊರಗಿ ಹೋಗುತ್ತಾ ಬಂದ ಫಿರದೌಸೀ ಕವಿಚಂದ್ರನು ಆ ಬಂಗಾರದ ನಾಣ್ಯಗಳು ಬಂದಾಗ ಅಸ್ತಮಿಸಿ ಹೋಗಿದ್ದ!

ಅಲ್ಲಿ ಅವನ ಮಗಳು ಮಾತ್ರವೇ ಇದ್ದಳು. ಸಂಗತಿಯನ್ನು ತಿಳಿದುಕಡೆಗೆ ಮಂತ್ರಿ ಆ ಬಂಗಾರದ ದಿನಾರಗಳನ್ನು ಅವಳಿಗೇ ಕೊಡಹೋದನು. ಅವಳು ಅದನ್ನು ಸ್ವೀಕರಿಸದೆ, ಬಹಳ ದುಃಖದಿಂದಲೂ ಆವೇಶದಿಂದಲೂ ಅವರನ್ನುಕುರಿತು—"ನೀವೆಲ್ಲಾ ಕಾಲಯಮಸ್ವರೂಪರು. ಇದು ನನ್ನ ತಂದೆಯ ಜೀವಿತವನ್ನೆ ಹಾಳುಮಾಡಿದ ನೀಚದ್ರವ್ಯ. ಇದನ್ನು ನಾನು ಮುಟ್ಟಿದ್ದೇ ಆದರೆ ನನ್ನ ತಂದೆಯ ಆತ್ಮಕ್ಕೆ ಶಾಂತಿಯಾಗದು. ತೆಗೆದುಕೊಂಡು ಹೋಗಿರಿ. ಈ ದ್ರವ್ಯದಿಂದ ಕೋಟೆ-ಕೊತ್ತಳ, ಮನೆಮಾಳಿಗೆಗಳನ್ನು ಕಟ್ಟಿಕೊಂಡು ನಿಮ್ಮ ಬಾದಷಹನೇ ಸುಖವಾಗಿರಲಿ...." ಎಂದು ಹೇಳಿ ಅವರೆಲ್ಲರನ್ನೂ ಹಿಂದೆ ಕಳುಹಿಸಿದಳು.

ಈ ವಾರ್ತೆಯನ್ನು ಕೇಳುತ್ತಲೇ ಬಾದಷಹನಿಗೆ ವಜ್ರಾಘಾತವಾದಂತಾಯಿತು. ಒಡನೇ ಅವನು ಸಭಾಸ್ಥಾನದಿಂದ ಎದ್ದು ಅಂತರ್ಗೃಹಕ್ಕೆ ಹೋಗಿ ಬಾಗಿಲು ಹಾಕಿಕೊಂಡು, ಆ ಕವೀಶ್ವರನನ್ನು ನೆನೆಯುತ್ತಾ ದಳದಳನೆ ಕಣ್ಣೀರು ಸುರಿಸಿ ಅತ್ತನು!

ಅನಂತರ 'ದೂಸ್' ಪಟ್ಟಣದಲ್ಲಿ ಆ ಫಿರದೌಸಿಯ ಹೆಸರಿನಲ್ಲಿ ಒಂದು ಛತ್ರವನ್ನು ಕಟ್ಟಿಸಿ, ಆ ಮಹಾಕವಿಯ ಋಣವನ್ನು ತೀರಿಸಿಕೊಂಡನು. ಆ ಛತ್ರವು ಶಿಥಿಲವಾಗಿ ಈಗಲೂ ಆ ಸ್ಥಳದಲ್ಲಿ ಕಾಣುತ್ತದೆ. ಪಾರಸಿಗರು ಆ ಶಿಥಿಲದೃಶ್ಯವನ್ನು ನೋಡಿ ಈಗಲೂ ಕಣ್ಣೀರು ಬಿಡುತ್ತಾರೆ.



# ನಾಗಮ್ಮನ ನಂಜು

ಚೆನ್ನರಾಯಪುರದ ಸೀತಾಪೇಟೆಯ ಛತ್ರಾರ ಬೀದಿಯಲ್ಲಿ ಏಳನೇ ನಂಬರಿನ ಮನೆ ನಾಗಮ್ಮನದು. ಎಂಟನೇ ನಂಬರಿನದು ಪಾರಮ್ಮನದು. ಆದ್ದರಿಂದ ಅವರಿಬ್ಬರೂ, ಒಬ್ಬರನ್ನು ನೋಡಿ ಒಬ್ಬರು ಮಿಂಚುವಂತೆ ವರ್ತಿಸುತ್ತಿದ್ದರು. ಪ್ರತಿವಿಷಯದಲ್ಲಿಯೂ ಅವರಿಬ್ಬರಿಗೂ ಒಂದುವಿಧವಾದ ಸ್ಪರ್ಧೆ.

ಮಗಳು ಹುಟ್ಟಿದ ಹಬ್ಬವನ್ನು ಇಬ್ಬರೂ ಆಚರಿಸಿದರು. ಪಾರಮ್ಮ ಕಾಗದದ ಪೊಟ್ಟಣದಲ್ಲಿ ತಾಂಬೂಲ, ಬಾಳೇಹಣ್ಣು, ಮಿಠಾಯಿಗಳನ್ನು ಇಟ್ಟು ಮುತ್ತೈದೆಯರಿಗೆ ಕೊಟ್ಟಳು. ನಾಗಮ್ಮ ತನ್ನ ಮಗಳ ಹುಟ್ಟಿದ ಹಬ್ಬಕ್ಕೆ ಬಟ್ಟೆಯ ಚೀಲಗಳನ್ನು ಹೊಲಿಸಿ, ಪ್ರತಿ ಸಂಚಿಯಲ್ಲಿ ಒಣಕೊಬ್ಬರಿ, ಮೈಸೂರು ಪಾಕು ಮುಂತಾದ ಇನ್ನೂ ಏನೇನೋ ವಿಶೇಷವಸ್ತುಗಳನ್ನು ಇಟ್ಟು ಮುತ್ತೈದೆಯರಿಗೆ ಹಂಚಿದಳು.

ಅವಳು ಎರಡಂಗುಲದ ಜರೀಸೀರೆ ಕೊಂಡುಕೊಂಡರೆ, ಇವಳು ಮೂರಂಗುಲದ ಜರೀಸೀರೆ ಕೊಂಡುಕೊಂಡು ಅದನ್ನು ಉಟ್ಟುಕೊಂಡು, ಏನೋ ಕೆಲಸವಿರುವಂತೆ ಅವಳ ಮನೆಗೆಹೋಗಿ ಪ್ರದರ್ಶನಮಾಡಿ ಬರುತ್ತಿದ್ದಳು.

ಆ ಏಳನೇ ಹಾಗು ಎಂಟನೇ ನಂಬರಿನ ಮನೆಗಳು ಎರಡೂ ಹೊಸದಾಗಿ ಕಟ್ಟಿಸಿದ್ದೇ. ಎಂಟನೇನಂಬರಿನ ಮನೆಗೆ ಎಲೆಕ್ಟ್ರಿಕ್ ದೀಪಗಳುಂಟು. ನಾಗಮ್ಮನ ಮನೆಗೆ ಇಲ್ಲ.

ನಾಗಮ್ಮನಿಗೆ ಇದೊಂದು ಕಷ್ಟವಾಗಿಯೇ ತೋರಿತು. ಇದರಮೇಲೆ ಪಾರಮ್ಮ ರೇಡಿಯೋ ಕೊಂಡುಕೊಂಡು ಬಿಟ್ಟಿದ್ದಳು. ಇದರಿಂದ ನಾಗಮ್ಮ ಅಸೂಯೆಯಿಂದ ಸೊರಗಿ ಸೊರಗಿ ಹೋಗಲಾರಂಭಿಸಿದಳು. ಅವಳ ಒತ್ತಾಯದಿಂದ ನಾಗಮ್ಮನ ಗಂಡ ಒಂದು ಗ್ರಾಮಾಫೋನನ್ನು ಮನೆಗೆತಂದು ಹಾಕಿದನು. ಅಲ್ಲಿ ಎಲೆಕ್ಟ್ರಿಕ್ ಇದ್ದರೆ ಇಲ್ಲಿ ಪೆಟ್ರೋಮ್ಯಾಕ್ಸ್ ಬಂತು.

ಎಂಟನೇ ನಂಬರಿನ ಮನೆಯಲ್ಲಿ ರೇಡಿಯೋ ಕೇಳಿದಕೂಡಲೇ ನಾಗಮ್ಮ, ಹಾಲು ಉಕ್ಕುವ ಹೊತ್ತಾಗಿದ್ದರೂ ಹಾಗೆಯೇ ಬಿಟ್ಟು, ಹೋಗಿ ಗ್ರಾಮಾಫೋನ್ ಇಡುತ್ತಿದ್ದಳು.

ಡಿ. ಎಸ್. ಸುಂದರ - ಬೊಂಬಾಯಿ



ಮಾಡುವುದರೊಳಗೆ ಅವರೇ ಹೇಳಿಬಿಟ್ಟರು" ಎಂದಳು.

"ಯಾರು ಹೇಳಿದರೇನು ನಾಗಮ್ಮ? ಆದರೆ ನಮ್ಮ ಈ ದಸರೇ ಹಬ್ಬ ಚೆನ್ನಾಗಿ ಜರುಗ ಬೇಕಾಗಿದ್ದರೆ, ಪಾರಮ್ಮನವರು ಒಂದು ಉಪ ಕಾರ ಮಾಡಬೇಕು" ಎಂದರು ಲಲಿತಮ್ಮ. "ಏನು?" ಎಂದು ಪಾರಮ್ಮ ಕೇಳಿದಳು. "ಮತ್ತೇನಿಲ್ಲ ಹಬ್ಬದ ಒಂಭತ್ತು ದಿನಗಳ, ನಮ್ಮ ಮನೆಯ ಬೊಂಬೆಯ ಉತ್ಸವಕ್ಕೆ, ನಿಮ್ಮ ರೇಡಿಯೋ ಸ್ವಲ್ಪ ಕೊಡಬೇಕು" ಎಂದರು ಲಲಿತಮ್ಮ.

ರೇಡಿಯೋ ಇಟ್ಟುಕೊಂಡು ಪಾರಮ್ಮ ದೊಡ್ಡವಳಾಗಿ ಹೋಗುತ್ತಾಳೆಂದೂ, ತನಗೆ ಅಂತಹ ಭಾಗ್ಯವಿಲ್ಲದೆ ಹೋಯಿತೆಂದೂ ನಾಗಮ್ಮ ತನ್ನೊಳಗೆ ತಾನೇ ಚಡಪಡಿಸಿಕೊಂಡಿದ್ದಳು. ಆಗ ಪಾರಮ್ಮ ಲಲಿತಮ್ಮನನ್ನು ಕುರಿತು—"ನಮ್ಮ ರೇಡಿಯೋ ಈ ಮಧ್ಯ ಹಾಳಾಗಿದೆ. ರಿಪೇರಿಮಾಡಿಸಲು ನಮ್ಮ ಯಜಮಾನರು ತುಂಬಾ ಅಶ್ರದ್ಧೆಯಾಗಿದ್ದಾರೆ. ಅಲ್ಲದೆ ಅವರಿಗೆ ಸಮಯವೂ ಇಲ್ಲ" ಎಂದಳು.

ಇದನ್ನುಕೇಳಿ ನಾಗಮ್ಮನಿಗೆ ಬಹಳ ಸಂತೋಷವಾಯಿತು. ಪಾರಮ್ಮ ಹೊರಟು ಹೋದಮೇಲೆ ನಾಗಮ್ಮ ಲಲಿತಮ್ಮನನ್ನು ಕುರಿತು "ಆಹಾ! ಎಂಥಾ ಸುಳ್ಳು ಹೇಳಿದ ಳವಳು! ರೇಡಿಯೋ ಹಾಳಾಗಿದೆಯಂತೆ! ಇದೇ ಈಗ ರೇಡಿಯೋ ಹಾಡುತ್ತಾ ಇತ್ತು ಅವಳ ಮನೇಲಿ" ಎಂದು ಒಂದು ಹಸೀ

ಆ ಊರಿನಲ್ಲಿರುವ ಹೆಂಗುಸರೆಲ್ಲಾ ಪಾರಮ್ಮನೆಂದರೆ ತುಂಬಾ ಮರ್ಯಾದೆ ಕೊಡುತ್ತಿದ್ದರು. ಇದನ್ನೂ ನಾಗಮ್ಮನಿಗೆ ಸಹಿಸಲಾಗುತ್ತಿದ್ದಿಲ್ಲ.

ಅಷ್ಟರಲ್ಲಿ ದಸರೆಯ ಹಬ್ಬ ಬಂತು. ಆ ಬೀದಿಯ ಹೆಂಗುಸರೆಲ್ಲಾ ಒಂದು ನಿಶ್ಚಯ ಮಾಡಿಕೊಂಡರು. ಅವರವರ ಮನೆಯಲ್ಲಿ ಬೊಂಬೆಗಳನ್ನು ಇಟ್ಟುಕೊಳ್ಳುವುದಕ್ಕಿಂತ, ಎಲ್ಲರ ಬೊಂಬೆಗಳನ್ನೂ ಲಲಿತಮ್ಮನವರ ಮನೆಯಲ್ಲಿಯೇ ಇಟ್ಟು ಬ್ರಹ್ಮಾಂಡವಾಗಿ ಅಲಂಕರಿಸೋಣ, ಎಂದುಕೊಂಡರು.

ಅದಕ್ಕೆ ಪಾರಮ್ಮ— "ಚೆನ್ನಾಗಿದೆ ಈ ಪದ್ಧತಿ. ಹಾಗೆಯೇ ಮಾಡುವ" ಎಂದಳು. ಕೂಡಲೇ ನಾಗಮ್ಮ "ಈ ಯೋಚನೆ ನನಗೇ ಮೊದಲುತೋರಿತು. ನಾನು ಹೇಳುವಾ ಅಂತ




ಸುಳ್ಳನ್ನು ಹೇಳಿ, "ಹೋಗಲಿ ಲಲಿತಮ್ಮ, ನಮ್ಮ ಗ್ರಾಮಾಫೋನ್ ಕೊಡುತ್ತೇನೆ; ತೆಗೆಸಿಕೊಂಡು ಹೋಗಿರಿ. ನಾಡದು ಪಾಡ್ಯಮಿಯಂದು ನೀವೇ ಬನ್ನಿ. ಯಾವ ಪ್ಲೇಟು ಬೇಕೋ ತೆಗೆದುಕೊಂಡು ಹೋಗಿ"ಎಂದಳು. ಲಲಿತಮ್ಮ ಅವಳಿಗೆ ಕೃತಜ್ಞತೆ ಹೇಳಿ ಹೊರಟುಹೋದರು.

ಆ ರಾತ್ರಿ ನಾಗಮ್ಮನ ಮಗ ಗ್ರಾಮಾಫೋನಿಗೆ 'ಕೀ' ಕೊಡುತ್ತಾ ಇರುವಾಗ ಒಂದು ಸ್ಪ್ರಿಂಗ್ ಪಟಕ್ಕೆಂದು ಮುರಿದುಹೋಯಿತು. "ಅಯ್ಯೋ! ನಾಶಮಾಡಿದಿಯಲ್ಲೋ! ನಾಡದು ಲಲಿತಮ್ಮ ಬಂದರೆ ಏನು ಹೇಳಲಿ!" ಎಂದು ನಾಗಮ್ಮ ಚಡಪಡಿಸಿದಳು. ಕೂಡಲೇ ಅದನ್ನು ರಿಪೇರಿಮಾಡಿಸಿರೆಂದು ಗಂಡನಿಗೆ ಉಪದ್ರವಿಸತೊಡಗಿದಳು. ಅವನು "ನೋಡೋಣ"ಎಂದು ಅಲಕ್ಷ್ಯವಾಗಿ ಹೇಳಿದನು. "ಏನು ಮಾಡಲಿ ದೇವರೇ!" ಎಂದು ನಾಗಮ್ಮ ರಾತ್ರಿಪೂರಾ ಚಿಂತಿಸುತ್ತ ನಿದ್ರೆಯಿಲ್ಲದೆ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಳು.

ಮರುದಿನ ಗಂಡಸರು ಆಫೀಸಿಗೆ ಹೋದ ಮೇಲೆ, ಪಾರಮ್ಮ ಊಟವನ್ನು ಮುಗಿಸಿಕೊಂಡು ಬಾಗಿಲಿಗೆ ಬೀಗಹಾಕಿ ಎಲ್ಲಿಗೋ ಹೊರಟಳು. ಅದನ್ನು ನೋಡಿ ನಾಗಮ್ಮ "ಎಲ್ಲಿಗೋ?" ಎಂದುಕೊಂಡಳು.

ಮತ್ತೊಂದು ಗಂಟೆಯಮೇಲೆ ಒಂದು ಮೋಟಾರುಲಾರಿ,ಪಾರಮ್ಮನ ಮನೆಯ ಇದಿರಿನಲ್ಲಿ ಬಂದು ನಿಂತಿತು. ನಾಗಮ್ಮ ಹೊರಗೆ ಬಂದು ನೋಡಿದಳು. ಮಟಮಧ್ಯಾಹ್ನದ ಬಿಸಿಲಿನಹೊತ್ತು. ಬೀದಿಯಲ್ಲಿ ಜನಸಂಚಾರವಿಲ್ಲ.

ಆಗ ಲಾರಿಯಲ್ಲಿ ಬಂದವರಿಬ್ಬರು ಪಾರಮ್ಮನ ಮನೆಯೊಳಗೆ ಹೊಕ್ಕು ರೇಡಿಯೋವನ್ನು ಹೊತ್ತುಕೊಂಡು ಬರುವುದು ನಾಗಮ್ಮನ ಕಣ್ಣಿಗೆಬಿತ್ತು. ಆಗ ಅವಳು "ಓಹೊ! ಇದಕ್ಕೋ ಹೋದದ್ದು ಪಾರಮ್ಮ? ರಹಸ್ಯವಾಗಿ ರೇಡಿಯೋವನ್ನು ರಿಪೇರಿಮಾಡಿಸುತ್ತಾಳಂತ ಕಾಣುತ್ತೆ. ನಾನು ಲಲಿತಮ್ಮನಿಗೆ ಗ್ರಾಮಾಫೋನ್ ಕೊಡುತ್ತೇನೆಂದದ್ದು ಕೇಳಿ, ಆ ಮರ್ಯಾದೆ ತನಗೇ ದಕ್ಕಬೇಕೆಂದುಕೊಂಡು ಅದನ್ನು ಬೇಗಬೇಗನೇ ರಿಪೇರಿ ಮಾಡಿಸುವುದೋ!" ಎಂದುಕೊಂಡಳು.

ಕೂಡಲೇ ನಾಗಮ್ಮ ಅವರನ್ನು ಕುರಿತು— "ನನಗೆ ತಿಳಿಯಿತು ನಿಮ್ಮಗುಟ್ಟು! ರೇಡಿಯೋ

ರಿಪೇರಿಗಾಗಿ ಹೊತ್ತುಕೊಂಡು ಹೋಗು ತ್ತೀರಾ? ಬೇಗನೇ ರಿಪೇರಿಮಾಡಿ ತರಬೇ ಕಂತ ಹೇಳಿದ್ದಾಳಲ್ಲವೇ ಪಾರಮ್ಮ! ಅಬ್ಬ! ಏನುಗುಟ್ಟೊ!" ಎಂದಳು. ಇವಳನ್ನು ನೋಡಿ ಅವರಿಬ್ಬರೂ ಬೆಚ್ಚಿಬಿದ್ದರು. ಕೂಡಲೇ ಅವರ ಲ್ಲೊಬ್ಬ ತಟ್ಟನೆ—"ಹೌದಮ್ಮ ಯಾರಿಗೂ ತಿಳಿಸಬಾರದೆಂದಿದ್ದಾರೆ. ಸಂಜೆಯೊಳಗೆ ತಂದು ಮನೆಯೊಳಗೆ ಇಟ್ಟುಬಿಡಬೇಕೆಂದಿ ದ್ದಾರೆ" ಎಂದನು.

"ಹಾಗಾದರೆ ನೀವು ಗ್ರಾಮಾಫೋನ್ ಕೂಡಾ ರಿಪೇರಿ ಮಾಡ್ತೀರಾ?" ಎಂದು ನಾಗಮ್ಮ ಕೇಳಿದಳು.

"ಮಾಡುತ್ತೇವೆ" ಒಂದು ಉತ್ತರಬಂತು.

"ಆ ರೇಡಿಯೋ ರಿಪೇರಿಗೆ ತುಂಬಾ ಅವ ಸರವೇನಿಲ್ಲ. ನನ್ನ ಗ್ರಾಮಾಫೋನ್‌ಮಾತ್ರ ಈದಿನ ಸಂಜೆಯೊಳಗೇ ಸರಿಮಾಡಿ ತಂದು ಕೊಡಬೇಕು. ನೀವುಕೇಳಿದ ಬಹುಮಾನ ಕೊಟ್ಟೇನು" ಎಂದಳು.

ಅವರು ಹಾಗೆಯೇ ಆಗಲೆಂದು ಒಪ್ಪಿ, ನಾಗಮ್ಮನ ಗ್ರಾಮಾ ಫೋನನ್ನು ಕೂಡಾ ತಮ್ಮ ಲಾರಿಯಲ್ಲಿ ಹಾಕಿಕೊಂಡು ಓಡಿದರು.

ಸಾಯಂಕಾಲ ನಾಲ್ಕುಗಂಟೆಯ ಹೊತ್ತಿಗೆ ಪಾರಮ್ಮ ಮನೆಗೆಬಂದು ಬೀಗತೆಗೆದು ಒಳಕ್ಕೆ ಹೋದಳು. ಮನೆಯೊಳಗೆ ರೇಡಿಯೋ ಕಾಣ ಲಿಲ್ಲ. ಕೂಡಲೇ ಅವಳು ಗಾಬರಿಯಿಂದ ನಾಗ ಮ್ಮನ ಬಳಿಗೆಬಂದು "ಅಯ್ಯೋ! ನಾಗಮ್ಮ! ಯಾರೋ ನಮ್ಮ ರೇಡಿಯೋ ಹೊತ್ತು ಕೊಂಡು ಹೋದರು. ಮನೆಯ ಬೀಗವನ್ನು ಕಳ್ಳ ಬೀಗದಕೈಯಿಂದ ತೆಗೆದು ರೇಡಿಯೋ ಮಾತ್ರ ಕದ್ದಿದ್ದಾರೆ. ಪುಣ್ಯಕ್ಕೆ ಮತ್ತೇನೂ ಮುಟ್ಟಿಲ್ಲ" ಎನ್ನುತ್ತಾ ದುಃಖಿಸಿದಳು.

ಪಾರಮ್ಮನ ಎದೆನಿಂತು ಹೋದಂತಾ ಯಿತು. "ಕಳ್ಳರೇ ಅವರು!" ಎಂದು ಬಾಯಿ ತೆರೆದು ಕುಳಿತುಬಿಟ್ಟಳು ನಾಗಮ್ಮ! "ಅದ ರಿಂದಲೇ ನನ್ನನ್ನು ನೋಡಿ ಭಯಪಟ್ಟಂತೆ ತೋರಿದರು. ನಾನು ನನ್ನಕೈಯಾರೆ ನಮ್ಮ ಗ್ರಾಮಾಫೋನನ್ನು ಅವರಿಗೆ ಕೊಟ್ಟಹಾಗಾ ಯಿತು. ನನ್ನನ್ನು ನೋಡಿದುದರಿಂದಲೇ ಅವರಿಗೆ ಪಾರಮ್ಮನ ಮನೆಯದ. ಮತ್ತೇನೂ ಕದ್ದ ಕೊಳ್ಳಲಿಕ್ಕಾಗಲಿಲ್ಲ. ಸುಮ್ಮನೆ ಸ್ಪರ್ಧೆಗೆ ನಿಂತರೆ ಇದೇಗತಿ!...." ಎಂದು ನಾಗಮ್ಮ ತನ್ನೊಳಗೆ ತಾನೇ ಹೇಳಿಕೊಳ್ಳುತ್ತಿದ್ದಳು.





# ದುಷ್ಟಶಾಸನ

ಅನೇಕ ವರ್ಷಗಳ ಹಿಂದೆ ಸುವರ್ಣಪುರವೆಂಬ ನಗರದಲ್ಲಿ ಮಣಿಭದ್ರನೆಂಬ ಮಹಾರಾಜನಿದ್ದನು. ಅವನು ಎಲ್ಲಾ ವಿಷಯದಲ್ಲಿ ಒಳ್ಳೆಯ ರಾಜನಾದರೂ, ಒಂದುವಿಷಯದಲ್ಲಿ ಬಹಳ ಕಠಿನನಾಗಿದ್ದನು. ರಾಜ್ಯದೊಳಗೆ ಎಲ್ಲಿಯಾದರೂ ಅವಳಿ ಮಕ್ಕಳು ಹುಟ್ಟಿದರೆ, ರಾಜ್ಯಕ್ಕೇ ಕೇಡೆಂದು ಅವನದೊಂದು ನಂಬುಗೆ. ಆದ್ದರಿಂದ ಅವಳಿಮಕ್ಕಳು ಹುಟ್ಟಿದ ಕೂಡಲೆ, ತನಗೆ ತಿಳಿಸಬೇಕೆಂದು ಅವನ ಶಾಸನ. ಕೂಡಲೇ ಅವನು ಆ ಮಕ್ಕಳನ್ನು ಕೊಲ್ಲಿಸಿಬಿಡುತ್ತಿದ್ದನು. 'ಎಲ್ಲಾ ಬಣ್ಣ ಮಸಿ ನುಂಗಿದಂತೆ' ಇದೊಂದು ದುಷ್ಟಶಾಸನದಿಂದ ಅವನು 'ದುಷ್ಟರಾಜ' ನೆಂಬ ಕೆಟ್ಟ ಹೆಸರು ಪಡೆದಿದ್ದ.

ಆ ರಾಜ್ಯದ ಒಂದು ಕುಗ್ರಾಮದಲ್ಲಿ ದೇವಯ್ಯ ಚಂದ್ರಮತಿ ಎಂಬ ಬಡ ದಂಪತಿಗಳಿದ್ದರು. ಅವರಿಗೆ ಬಹುಕಾಲ ಮಕ್ಕಳಿಲ್ಲದೆ, ಕಡೆಗೆ ಸಂತಾನಭಾಗ್ಯ ವುಂಟಾಗುವ ಸೂಚನೆ ತೋರಿತು. ಅದೂ ಅವಳಿಮಕ್ಕಳು ಹುಟ್ಟುವ ಲಕ್ಷಣಗಳನ್ನು ನೋಡಿ ಚಂದ್ರಮತಿ ದುಃಖಿಸತೊಡಗಿದಳು. "ದುರದೃಷ್ಟವಶಾತ್ ಅವಳಿಯೇ ಹುಟ್ಟಿದರೆ ಅರಸನು ಕೊಲ್ಲಿಸುವನಲ್ಲಾ!" ಎಂದು ಅವಳು ಕೊರಗತೊಡಗಿದಳು.

ಆದರೆ ಧೈರ್ಯಶಾಲಿಯಾದ ದೇವಯ್ಯ ಪತ್ನಿಗೆ ತುಂಬಾ ಧೈರ್ಯ ಹೇಳಿದ; ಇಷ್ಟೇ ಅಲ್ಲ, ತನ್ನ ಮನೆಯ ರಹಸ್ಯಗಳು ಬೇರೆಯಾರಿಗೂ ಗೊತಾಗದಂತೆ ಗುಟ್ಟಾಗಿರುವಂತಹ ಏರ್ಪಾಡುಗಳನ್ನೆಲ್ಲಾ ಮಾಡಿದ. ಸಮಯಕ್ಕೆ ಸಹಾಯವಾಗಿರಲೆಂದು ಚಂದ್ರಮತಿಯ ತಾಯಿಯನ್ನೂ ಕರೆಸಿದ. ಆ ತಾಯಿಯ ಹೆಸರು ವೀರವ್ವ. ಇವಳು ರಾಜನ ಅರಮನೆಗೆ ಸೇರಿದ ಒಬ್ಬಳು ವೃದ್ಧದಾಸಿ.

ಊಹಿಸಿದಂತೆಯೆ ಚಂದ್ರಮತಿಗೆ ಅವಳಿ ಮಕ್ಕಳೇ ಹುಟ್ಟಿದುವು. ವೀರವ್ವ ರಹಸ್ಯವಾಗಿ ಬಹು ಜಾಗರೂಕತೆಯಿಂದ ಚಂದ್ರಮತಿಯ ಬಾಣಂತನವನ್ನು ಮಾಡಿದಳು. ಎಲ್ಲವೂ ಗುಟ್ಟಾಗಿಯೇ ನಡೆಯಿತು. ಮಕ್ಕಳಲ್ಲಿ ಮೊದಲನೆಯದು ಗಂಡು, ಎರಡನೆಯದು ಹೆಣ್ಣು. ಅವರಿಗೆ ಕ್ರಮವಾಗಿ ವಿಕ್ರಮ, ವಿಜಯ ಎಂದು ಹೆಸರಿಟ್ಟರು.

ವಿಶ್ವನಾಥ ಬೋಳೂರು



ಮಕ್ಕಳು ಹುಟ್ಟಿದರೆ ಅಕ್ಕಪಕ್ಕದವರಿಗೆ ತಿಳಿಯದೆ ಇರುತ್ತೆಯೆ? ಅದಕ್ಕಾಗಿ ದೇವಯ್ಯನು ಒಂದೇ ಗಂಡುಮಗು ಹುಟ್ಟಿರುವುದಾಗಿ ತೋರುವಂತೆ ಉಪಾಯ ಮಾಡಿದ್ದ. ಆಗಾಗ ವಿಜಯಳಿಗೂ ಗಂಡುವೇಷ ಹಾಕುತ್ತಿದ್ದ. ಹೊರಗೆ ಹೋಗುವಾಗ ಗಂಡುವೇಷದ ವಿಜಯಳೋ ವಿಕ್ರಮನೋ ಯಾರಾದರೊಬ್ಬರನ್ನೆ ಕರಕೊಂಡು ಹೋಗುತ್ತಿದ್ದರು.

ಹೀಗಿರಲು, ಇಲ್ಲಿ ಈ ಮಕ್ಕಳು ಹುಟ್ಟಿದ ಮೇಲೆ, ಅಲ್ಲಿ ಅರಮನೆಯಲ್ಲಿ ಮಣಿಭದ್ರ ಮಹಾರಾಜನಿಗೆ ಆಗಾಗ ಕೆಟ್ಟಕೆಟ್ಟ ಕನಸುಗಳು ಕಾಣಲಾರಂಭವಾದುವು. ಅರಸನು ಜ್ಯೋತಿಷ್ಕರನ್ನು ಕರೆಸಿ ಈ ಕನಸಿಗೆ ಕಾರಣವೇನೆಂದು ಪ್ರಶ್ನೆ ಹಾಕಿ ನೋಡಿಸಿದನು. ಆಗ ಜ್ಯೋತಿಷ್ಕರು ಹಾಗೆ ಹೀಗೆ ಲೆಕ್ಕಹಾಕಿ— "ಪ್ರಭು! ತಮ್ಮ ರಾಜ್ಯದಲ್ಲಿ ಎಲ್ಲಿಯೋ ಅವಳಿಮಕ್ಕಳು ಹುಟ್ಟಿವೆ. ಅದರ ಫಲಿತವೇ ಹೀಗಾಗುತ್ತದೆ" ಎಂದು ತೀರ್ಮಾನಿಸಿ ಹೇಳಿದರು.

ತತ್ಕ್ಷಣವೇ ಮಣಿಭದ್ರ ರಾಜನು ಊರೆಲ್ಲಾ ಹೀಗೆಂದು ಡಂಗುರ ಸಾರಿಸಿದನು. "ದೇಶದ ಯಾವ ಮೂಲೆಯಲ್ಲಿಯಾದರೂ ಅವಳಿಮಕ್ಕಳಿದ್ದರೆ, ಅವರನ್ನು ಹಿಡಿದುಕೊಟ್ಟವರಿಗೆ ದೊಡ್ಡ ಬಹುಮಾನ ಕೊಡಲ್ಪಡುವುದು!"

ಈ ಡಂಗುರವನ್ನು ಕೇಳಿ ದೇವಯ್ಯನು ಎಷ್ಟೇ ಧೈರ್ಯಶಾಲಿಯಾಗಿದ್ದರೂ ಭಯಪಟ್ಟನು. ಮಕ್ಕಳನ್ನು ಕಾಪಾಡಲು ಯುಕ್ತಿ ಹುಡುಕಿದನು. ಒಂದೇರೀತಿಯಾಗಿರುವ ಅವಳಿಮಕ್ಕಳನ್ನು ಬೇರೆಬೇರೆ ಕಡೆಗಳಲ್ಲಿ ಇಟ್ಟು ಪಾಲಿಸುವುದೇ ಉಚಿತವೆಂದು ಅವನಿಗೆ ತೋರಿತು. ಅದರಂತೆ ಚಂದ್ರಮತಿಯೊಂದಿಗೆ ಒಳ್ಳೆದು ಕೆಟ್ಟದುಗಳನ್ನು ಮಾತನಾಡಿ, ಕುಮಾರ ವಿಕ್ರಮನನ್ನುಮಾತ್ರ ಗುಟ್ಟಾಗಿ ತನ್ನೊಂದಿಗೆ ಕರೆದುಕೊಂಡು, ಬಾಗಾಪುರವನ್ನು ಸೇರಿದನು. ಭಾಗಾಪುರದ ಅರಸನು ಮಣಿಭದ್ರ ಮಹಾರಾಜನಿಗೆ, ಕಪ್ಪಕಟ್ಟುವವನಾಗಿದ್ದನು. ಅವನಿಗೂ ಹನ್ನೆರಡು ವರ್ಷ ಪ್ರಾಯದ ಕುಮಾರನಿದ್ದ. ವಿಕ್ರಮನಿಗೂ ಅಷ್ಟೇವಯಸ್ಸು. ಅಂತೆಯೇ ಆ ಇಬ್ಬರು ಹುಡುಗರಿಗೂ ಬಹಳ ಸ್ನೇಹವಾಯಿತು. ದೇವಯ್ಯನಿಗೂ ರಾಜನ ಕೋಟೆಯೊಳಗೇ ಕೆಲಸ ಸಿಕ್ಕಿತು. ಕುಮಾರ ವಿಕ್ರಮನು ತನ್ನ ಪ್ರತಿಭೆಯಿಂದ ಕ್ರಮವಾಗಿ ಅಭಿವೃದ್ಧಿಗೆ

ಬರುತ್ತ, ಕಡೆಗೆ ಆ ರಾಜಧಾನಿಗೆ ಅವನೇ ಸೇನಾಧಿಪತಿಯೂ ಆದನು.

ಇತ್ತ ಚಂದ್ರಮತಿ ತನ್ನ ಗಂಡು ವೇಷದ ಮಗಳೊಂದಿಗೆ ತನ್ನ ತಾಯಿ ವೀರವ್ವನ ಜತೆಯಲ್ಲಿದ್ದಳು. ವೀರವ್ವ ಕೋಟೆಯೊಳಗೆ ರಾಜಭವನಕ್ಕೆ ಸೇರಿದ ದಾಸಿಯಾದುದರಿಂದ ಅಲ್ಲಿ ನಿರ್ಭಯವಾಗಿರಬಹುದಾಗಿತ್ತು.

ಒಂದುದಿವಸ ವಿಜಯ, ವೀರವ್ವನೊಂದಿಗೆ ರಾಜಭವನಕ್ಕೆ ಹೋಗಿದ್ದಳು. ಅಲ್ಲೊಂದುಕಡೆ ಒಂದು ನಿಲುವುಗನ್ನಡಿ ಇತ್ತು. ವಿಜಯಳು ಆ ವರೆಗೂ ಕನ್ನಡಿ ನೋಡಿರಲಿಲ್ಲ. ಈಗ ಅಕಸ್ಮಾತ್ತಾಗಿ ನಿಲುವುಗನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡುತ್ತಲೇ ಅವಳ ಬಾಯಿಯಿಂದ ಅಪ್ರಯತ್ನವಾಗಿ—"ಅಣ್ಣ! ಅಣ್ಣ!!" ಎಂಬ ಉದ್ಗಾರ ಹೊರಟಿತು. ಪುರುಷವೇಷದಲ್ಲಿದ್ದ ಅವಳಿಗೆ, ಈ ಪ್ರತಿ ಬಿಂಬ ಅವಳ ಅಣ್ಣನಂತೆಯೇ ತೋರಿತ್ತು!

ಅವಳು ಕನ್ನಡಿಯನ್ನು ನೋಡಿ "ಅಣ್ಣ, ಅಣ್ಣ" ಎಂದು ಕೂಗಿಕೊಂಡದ್ದು ಆಚೆಯ ಬದಿಯಲ್ಲಿದ್ದ ಅರಮನೆಯ ದಾಸಿಗೆ ಕೇಳಿಸಿತು. ಅವಳು ಕುತೂಹಲದಿಂದ ಮರೆಯಲ್ಲಿ ನಿಂತು ನೋಡುತ್ತಿದ್ದಳು!

ಅಷ್ಟರಲ್ಲಿಯೇ ವೀರವ್ವನೂ ಅಲ್ಲಿಗೆ ಬಂದಳು. ಮೊಮ್ಮಗಳು ಕನ್ನಡಿಯ ಪ್ರತಿಬಿಂಬವನ್ನು ನೋಡಿ "ಅಣ್ಣ! ಅಣ್ಣ!" ಎಂದು ಪುನಃ ಹೇಳಲು, ವೀರವ್ವ ಅವಳ ಬಾಯಿ ಮುಚ್ಚಿಸಿ, "ಇದು ಕನ್ನಡಿ. ನಿನ್ನ ಅಣ್ಣನೂ ನೀನೂ ಅವಳಿಜವಳಿ ಮಕ್ಕಳಾದ್ದರಿಂದ,



ಗಂಡು ವೇಷದಲ್ಲಿರುವ ನೀನು ಅವನ ಹಾಗೆಯೇ ಕಾಣಿಸುತ್ತಿ. ಇದನ್ನು ಯಾರಿಗೂ ಹೇಳಬಾರದು" ಎಂದು ಎಚ್ಚರಿಕೆ ಕೊಡುತ್ತಾ ಕರೆದೊಯ್ದಳು.

ಆ ಹೊಂಚಿಕೊಂಡಿದ್ದ ದಾಸಿ ಈ ಮಾತುಗಳನ್ನೆಲ್ಲಾ ಕೇಳಿ, ಬಹುಮಾನದ ಆಸೆಯಿಂದ, ಮಹಾರಾಜನ ಬಳಿಗೆ ಹೋಗಿ, ತಾನು ಕೇಳಿದ್ದನ್ನೆಲ್ಲಾ ಹೇಳಿಬಿಟ್ಟಳು. ಮತ್ತೆ ಕೇಳುವುದೇನು? ಮಣಿಭದ್ರರಾಜನು ವೀರವ್ವನನ್ನೂ ವಿಜಯಳನ್ನೂ ಕೂಡಲೇ ಸೆರೆ ಹಿಡಿಸಿದನು. ಪುಣ್ಯವಶಾತ್ ಆಗ ಚಂದ್ರಮತಿ ಯಾವುದೋ ಕೆಲಸಕ್ಕಾಗಿ ಕೋಟೆಯ ಹೊರಗೆ ಹೋಗಿದ್ದಳು. ಅಲ್ಲಿಯೇ ಅವಳಿಗೆ ಆ ಸಮಾಚಾರ ಸಿಡಿಲುಬಡಿದಂತೆ ಗೊತ್ತಾಯಿತು. ತನ್ನನ್ನೂ ರಾಜನು ಹಿಡಿಸುವನೆಂದೂ, ಆಮೇಲೆ ಯಾರಿಗೂ ವಿಮೋಚನೆ ಇಲ್ಲದಾ



ಲಿಲ್ಲ. ಕಡೆಗೆ ರಾಜನು ಅವಳ ಕೈಬರೆಹವನ್ನು ಬರೆಸಿ ಇಟ್ಟುಕೊಂಡನು. ಈ ಅಕ್ಷರಕ್ಕೆ ಹೋಲುವ ಅಕ್ಷರವನ್ನು ಯಾವನು ಬರೆಯುತ್ತಾನೋ ಅವನನ್ನು ಬಂಧಿಸಬೇಕೆಂದು ರಾಜನಯುಃಕ್ತಿ. ಅವಳಿಮಕ್ಕಳ ರೂಪದಂತೆಯೇ ಅವರ ಕೈಯಕ್ಷರಗಳೂ ಒಂದೇವಿಧವಾಗಿರುತ್ತಿದ್ದುವು. ಹೀಗೆ ವಿಜಯಳ ಅಣ್ಣನನ್ನು ಹಿಡಿಯಲು ರಾಜನು ಪ್ರಯತ್ನಪಡುತ್ತಿದ್ದನು.

· ಈಸಮಾಚಾರವನ್ನೆಲ್ಲಾ ಅರಿತುಕೊಂಡು ಚಂದ್ರಮತಿ, ತನ್ನ ಪತಿ ಪುತ್ರರೊಂದಿಗೆ ಮೊರೆಯಿಟ್ಟುಕೊಳ್ಳಲಿಕ್ಕಾಗಿ ಬಾಗಾಪುರದ ಕಡೆಗೆ ತೆರಳಿದಳು.

ಗುವುದೆಂದೂ ಯೋಚಿಸಿ, ಅವಳು ತಲೆ ಮರೆಸಿಕೊಂಡಳು.

ಮಣಿಭದ್ರರಾಜನು ವಿಜಯೆಯನ್ನೂ ವೀರಪ್ಪನನ್ನೂ ವಿಚಾರಣೆಮಾಡಿ ನಾನಾವಿಧವಾಗಿ ಪರೀಕ್ಷಿಸಿದನು. "ಇನ್ನೊಬ್ಬ ಅವಳೀ ಜತೆ ಎಲ್ಲಿದ್ದಾನೆ?" ಎಂದು ಎಷ್ಟೋ ಕೇಳಿ ನೋಡಿದನು. ಎಷ್ಟೇಬಾಧೆಕೊಟ್ಟು ವಿಚಾರಿಸಿದರೂ ವೀರಪ್ಪ ವಿಕ್ರಮನ ಗುಟ್ಟನ್ನು ಹೇಳಲೇ ಇಲ್ಲ. ತನ್ನ ಪ್ರಾಣ ಹೋಗುವುದಾದರೂ ಆ ರಹಸ್ಯವನ್ನು ಹೇಳಲಾರೆನೆಂದು ಖಂಡಿತವಾಗಿ ಹೇಳಿಬಿಟ್ಟಳು. ಅದರಿಂದ ಕೋಪಗೊಂಡ ಮಣಿಭದ್ರ ಮಹಾರಾಜನು ವೀರಪ್ಪನನ್ನು ಗಲ್ಲಿಗೇ ಹಾಕಿಸಿಬಿಟ್ಟನು.

ಎಷ್ಟು ನಿರ್ಬಂಧಿಸಿದರೂ ಅಣ್ಣನನ್ನು ಕುರಿತು ವಿಜಯೆಯೂ ಏನೂ ಹೇಳಲಿಲ್ಲ. ನಿಜಕ್ಕೂ ಅವಳಿಗೆ ಆ ವಿಷಯ ಗೊತ್ತೂ ಇರ

ಆಗ, ಒಂದುದಿನ ಬಾಗಾಪುರದಿಂದ ಒಬ್ಬ ರಾಯಭಾರಿ ಬಂದು ಮಣಿಭದ್ರ ಮಹಾರಾಜನಿಗೆ ಒಂದು ಪತ್ರವನ್ನು ಸಮರ್ಪಣೆ ಮಾಡಿದನು. ಆ ಪತ್ರದ ಅಕ್ಷರವನ್ನು ನೋಡುತ್ತಲೇ ಮಣಿಭದ್ರರಾಜನಿಗೆ ಮಿಂಚಿನಂತೆ ಏನೊ ಹೊಳೆಯಿತು. ಕೂಡಲೇ ವಿಜಯಳ ಕೈಯಕ್ಷರಕ್ಕೂ ಆ ಪತ್ರದ ಅಕ್ಷರಕ್ಕೂ ಹೋಲಿಸಿ ನೋಡಿದಾಗ, ಎರಡೂ ಒಂದೇರೀತಿಯಾಗಿತ್ತು. "ಓಹೊ! ವಿಜಯೆಯ ಅಣ್ಣ ಬಾಗಾಪುರದಲ್ಲಿರುವನೇ! ಇನ್ನೇನು? ನನ್ನ ಕೈಗೆ ಸಿಕ್ಕಿಬಿದ್ದಂತೆಯೇ!" ಎಂದುಕೊಂಡು ಆ ಪತ್ರವನ್ನು ಓದಿದನು. ಅದರಲ್ಲಿ ಭಾಗಾಪುರದ ಅರಸನು ಹೀಗೆ ಬರೆಯಿಸಿದ್ದನು : "ಮಣಿಭದ್ರ ಚಕ್ರವರ್ತಿ ಮಹಾಪ್ರಭುಗಳೆ, ನಾನು ತಮ್ಮ ಸನ್ನಿಧಿಗೆ ಒಂದೇಬಾರಿ ಎಂಭತ್ತು ಬಂಡಿಗಳಲ್ಲಿ ಬಂಗಾರದ ನಾಣ್ಯಗಳನ್ನು ಕಳುಹಿಸು

ತ್ರೀನೆ. ತಾವು ಅದನ್ನು ಸ್ವೀಕರಿಸಿಕೊಂಡು, ನನ್ನ ಭಾಗಾಪುರ ರಾಜ್ಯವನ್ನು ಸ್ವತಂತ್ರರಾಜ್ಯವೆಂದು ಪ್ರಕಟಿಸಬೇಕು...."

ಈ ಅಭಿಪ್ರಾಯವನ್ನೋದಿ ಮಣಿಭದ್ರ ರಾಜನಿಗೆ ಸಂತೋಷವೇ ಆಯಿತು. "ಈಗ ಕಳಿಸಿದ ಪತ್ರವನ್ನು ಯಾವನು ಬರೆದಿರುವನೋ ಅವನ ಮೂಲಕವಾಗಿ, ನೀವು ಹೇಳಿದಂತೆ ನಾಣ್ಯಗಳನ್ನು ಕಳಿಸಿದ್ದಾದರೆ ನಿಮ್ಮ ಕೋರಿಕೆ ಈಡೇರಿಸಲ್ಪಡುವುದು...." ಎಂದು ಮಣಿಭದ್ರನು ಭಾಗಾಪುರ ದರಸನಿಗೆ ಪ್ರತ್ಯುತ್ತರವನ್ನು ಕಳಿಸಿದನು.

ಅನಂತರ ಕೆಲವು ದಿನಗಳಲ್ಲಿ ಭಾಗಾಪುರ ಸಂಸ್ಥಾನದಿಂದ ಎಂಭತ್ತು ಬಂಡಿಗಳು ಸಾಲು ಸಾಲಾಗಿ ಬಂದು ಸುವರ್ಣಪುರದ ಕೋಟೆಯೊಳಗೆ ಹೊಕ್ಕವು. ಬಂಡಿಗಳಿಗೆ ಮುಂದೂ ಹಿಂದೂ ಅನೇಕ ಸೈನಿಕರು ಕಾವಲಾಗಿದ್ದರು. ಅವಳಿಯ ಜತೆಯವನನ್ನು ನೋಡಬೇಕೆಂಬ ಕುತೂಹಲದಿಂದ, ಮಣಿಭದ್ರ ಮಹಾರಾಜನು ಮುಂದೆಬಂದನು. ಆಗಲೇ ವೀರ ಸೇನಾಧಿಪತಿ ವಿಕ್ರಮಕುಮಾರನು ಅವನಿದಿರು ಬಂದು ನಿಂತು, ವಿನಯದಿಂದ ನಮಸ್ಕರಿಸಿದನು. ಮಣಿಭದ್ರನಿಗೆ ಏನೂ ಸಂದೇಹವುಳಿಯಲಿಲ್ಲ. ವಿಜಯ ವಿಕ್ರಮರು ಒಂದೇ ಅಚ್ಚಿನಲ್ಲಿ ಎರಕ ಹೊಯ್ದ ಚಿತ್ರದಂತಿದ್ದಾರೆ.

"ಹಣದ ಸಂಚಿಗಳನ್ನು ಇಳಿಸಬಹುದೆ?" ಎಂದು ವಿಕ್ರಮನು ಕೇಳಿದ-

"ತಡೆ ನಿನಗೆ ವಿಜಯೆ ಎಂಬ ತಂಗಿ ಇದ್ದಾಳೊ?" ಎಂದು ಮಣಿಭದ್ರನು ತಿರುಗಿ



ಪ್ರಶ್ನೆಹಾಕಿದ. "ಇದ್ದಾಳೆ. ಅವಳು ನಿಮ್ಮ ಸೆರೆಯಲ್ಲಿದ್ದಾಳೆಂದು ನಮ್ಮ ತಾಯಿ, ಪುಣ್ಯವಶಾತ್ ನಿಮ್ಮ ಕೈಯಿಂದ ತಪ್ಪಿಬಂದು ನಮಗೆ ಹೇಳಿದಳು. ಅಂತೆಯೇ ನಾನೂ...." ಎಂದು ವಿಕ್ರಮನು ಹೇಳುತ್ತಾ ಇರುವಾಗ— "ಇವನನ್ನು ಬಂಧಿಸಿರಿ" ಎಂದು ಮಣಿಭದ್ರನು ಆಜ್ಞಾಪಿಸಿದನು.

ಅದೇಕ್ಷಣದಲ್ಲಿ ವಿಕ್ರಮನೂ ಕಣ್ಣುಸನ್ನೆ ಮಾಡಿದನು. ಕೂಡಲೇ ದ್ರವ್ಯದ ಬಂಡಿಗಳಿಂದ, ದಬದಬನೆ ಅನೇಕ ವೀರಯೋಧರು ಕೆಳಕ್ಕೆ ಧುಮುಕಿದರು. ಸ್ವಲ್ಪಹೊತ್ತು ಆ ಸ್ಥಳವೆಲ್ಲಾ ರಣಕಳವಾಗಿ ಹೋಯಿತು. ವಿಕ್ರಮನ ಸೈನ್ಯಕ್ಕೂ ಮಣಿಭದ್ರನ ಸೇನೆಗೂ ಘೋರಕಾಳಗವಾಯಿತು. ಈ ಕಾಳಗದಲ್ಲಿ ಮಣಿಭದ್ರನು ಸತ್ತುಬಿದ್ದನು. ಇನ್ನೇನಿದೆ? ರಾಜ್ಯವು ವಿಕ್ರಮನ ಕೈವಶವಾಯಿತು.

ದುಷ್ಟನೆಂದು ಹೆಸರುಪಡೆದ ಮಣಿಭದ್ರನು ಸತ್ತನೆಂದು ಯಾರಿಗೂ ವ್ಯಸನವಾಗಲಿಲ್ಲ. ಸೇನಾಧಿಪತಿಯಾಗಿ ಬಂದ ವೀರ ವಿಕ್ರಮನನ್ನು ನೋಡಿ ಎಲ್ಲರೂ ಆನಂದಪಟ್ಟರು.

ವಿಕ್ರಮನು ವಿಜಯಶಾಲಿ ಯಾಗುತ್ತಲೇ ಮೊದಲು ವಿಜಯೆಯನ್ನು ಬಂಧಮುಕ್ತ ಮಾಡಿದನು. ಒಂದೇ ರೂಪದಿಂದ ಕಂಗೊಳಿಸುವ ಅಣ್ಣ ತಂಗಿಯರಾದ ವಿಜಯಾ ವಿಕ್ರಮರನ್ನು ನೋಡಿ ಎಲ್ಲರಿಗೂ ಬಹಳ ಕುತೂಹಲವಾಯಿತು. ಇನ್ನುಮೇಲೆ ವಿಕ್ರಮನೇ ಸುವರ್ಣಪುರಿಗೆ ರಾಜನಾಗಿರ ಬೇಕೆಂದು ಪ್ರಜೆಗಳೆಲ್ಲಾ ಏಕಮುಖವಾಗಿ ಕೇಳಿಕೊಂಡರು. ಆದರೆ ವಿಕ್ರಮನುಮಾತ್ರ ಅದಕ್ಕೆ ಅಂಗೀಕರಿಸಲಿಲ್ಲ. ತನ್ನನ್ನು ಕಾಪಾಡಿದ ಭಾಗಾಪುರದೊಂದಿಗೆ ಸುವರ್ಣಪುರಿಯನ್ನು ಸೇರಿಸಬೇಕಾದ್ದೇ ತನ್ನ ಅಭೀಷ್ಟವೆಂದು ಸೂಚನೆ ಮಾಡಿದನು. ಅವನ ಈ ತ್ಯಾಗಬುದ್ಧಿಗೆ ಮೆಚ್ಚದವರಾರು?

ವಿಕ್ರಮನ ಬುದ್ಧಿ ಪರಾಕ್ರಮಗಳಿಗೆ ಮೆಚ್ಚಿದ ಭಾಗಾಪುರದರಸನು ತನ್ನ ಕುಮಾರನಿಗೆ ಪಟ್ಟಗಟ್ಟಿ ವಿಕ್ರಮನನ್ನು ಮುಖ್ಯ ಮಂತ್ರಿಯಾಗಿ ಗೊತ್ತುಮಾಡಿಕೊಂಡನು. ಆ ರಾಜಕುಮಾರ ನೊಂದಿಗೇ ವಿಜಯಳ ಮದುವೆಯೂ ಆಯಿತು. ಅವಳಿಮಕ್ಕಳನ್ನು ಸಂಹರಿಸುವಂತಹ ದುಷ್ಟಶಾಸನವೂ ರದ್ದಾಯಿತು.

ಇಷ್ಟೆಲ್ಲಾ ಸುಖಾಂತಕ್ಕೆ ಮುಖ್ಯಕಾಣಳಾದ ವೀರವ್ವನನ್ನು ಮರೆಯಲು ಸಾಧ್ಯವೆ? ಅವಳು ಜೀವದಾಶೆಯಿಂದ ವಿಕ್ರಮನು ಭಾಗಾಪುರದಲ್ಲಿರುವನೆಂದು ಹೇಳಿಬಿಟ್ಟರುತ್ತಿದ್ದರೆ, ಮಣಿಭದ್ರನು ನಿಮಿಷದಲ್ಲಿ ಆ ಸಣ್ಣ ರಾಜ್ಯವನ್ನು ಮುತ್ತಿ ವಿಕ್ರಮನನ್ನು ಹಿಡಿದು, ವಿಜಯ ವಿಕ್ರಮರನ್ನು ಒಟ್ಟಿಗೇ ಕೊಲ್ಲಿಸುತ್ತಿದ್ದ. ಚಂದ್ರಮತಿಯೂ, ದೇವಯ್ಯನೂ ನಿತ್ಯದುಃಖಕ್ಕೀಡಾಗುತ್ತಿದ್ದರು. ಹಾಗಾಗದಂತೆ ತನ್ನನ್ನೆ ಬಲಿಯಾಗಿ ಅರ್ಪಿಸಿ ತಮ್ಮೆಲ್ಲರನ್ನು ಕಾಪಾಡಿದ ವೀರವ್ವನನ್ನು ವಿಕ್ರಮನು ಮರೆಯಲಿಲ್ಲ. ಎಂದೆಂದೂ ಅವಳ ಜ್ಞಾಪಕವಿರುವಂತೆ, ಅವಳನ್ನು ಗಲ್ಲಿಗೆಹಾಕಿದ ಆ ಸ್ಥಳದಲ್ಲಿಯೇ ವೀರವ್ವನ ಸ್ಮಾರಕವನ್ನು ನಿರ್ಮಿಸಿ, ಅವಳಿಗೆ ಕೃತಜ್ಞತೆಯನ್ನು ಸಲಿಸಿದನು.






ಒಂದು ಅಡವಿದಾರಿಯಲ್ಲಿ ಒಬ್ಬ ಮನುಷ್ಯನು ಹೋಗುತ್ತಿದ್ದನು. ಅವನ ತಲೆಯ ಮೇಲೆ ಒಂದು ಬಾಳೇಹಣ್ಣಿನ ಹೊರೆಯಿತ್ತು. ಒಂದು ಮರದಮೇಲಿದ್ದ ಕೆಲವು ಕೋತಿಗಳು ಆ ಹಣ್ಣುಗಳನ್ನು ಲಪಟಾಯಿಸಬೇಕೆಂದು, ಯೋಚಿಸಿದುವು. ತನ್ನನ್ನು ಕೋತಿಗಳು ಹಿಂಬಾಲಿಸುತ್ತಿವೆ ಎಂದು ಪಾಪ ಅವನಿಗೆ ಗೊತ್ತೇ ಇಲ್ಲ!

ಕೋತಿಗಳು ವಾಸಮಾಡುವ ಆ ಮರದ ಬುಡದಲ್ಲಿದ್ದ ಒಂದು ಮೊಲಕ್ಕೂ ಆ ಕೋತಿಗಳಿಗೂ ತುಂಬಾ ಸ್ನೇಹ. ಕೋತಿಗಳು ಆ ಮೊಲದ ಬಳಿಗೆಬಂದುವು. "ಮೊಲರಾಯ, ಆ ಹಣ್ಣಿನವನ ಮುಂದೆ ನೀನು ಕೊಂಚ ಸುಳಿದಾಡು. ಆಗ ಅವನು ಹಣ್ಣಿನ ಬುಟ್ಟಿಯನ್ನು ಕೆಳಗಿಟ್ಟು ನಿನ್ನನ್ನು ಹಿಡಿಯಲಿಕ್ಕಾಗಿ ಓಡುವನು. ಅಷ್ಟರಲ್ಲಿ ನಾವು ಹಣ್ಣುಗಳನ್ನು ಅಪಹರಿಸುತ್ತೇವೆ. ನೀನೂ ತಪ್ಪಿಸಿಕೊಂಡು ಬಾ. ನಾವೆಲ್ಲಾ ಸೇರಿ ಒಟ್ಟಿಗೇ ಬಾಳೇಹಣ್ಣು ತಿನ್ನೋಣ" ಎಂದು ಉಪಾಯ ಹೇಳಿತು ದೊಡ್ಡ ಕೋತಿ.

ಮೊಲ 'ಸರಿ' ಎಂದಿತು. ಕೂಡಲೇ ಅವನ ಮುಂದೆ ಓಡಿತು. ಕೋತಿಗಳು ನೆನೆಸಿದಂತೆಯೇ ಹಣ್ಣಿನವನು, ಬುಟ್ಟಿಯನ್ನು ಒಂದೆಡೆಯಿಟ್ಟು ಆ ಮೊಲವನ್ನು ಹಿಡಿಯಲಿಕ್ಕಾಗಿ ಓಡಿದನು.

ಅದೇತಡ, ನಾಲ್ಕು ಕೋತಿಗಳೂ ಸೇರಿ, ಅವನ ಬುಟ್ಟಿಯನ್ನೆಲ್ಲಾ ಖಾಲೀಮಾಡಿಬಿಟ್ಟುವು. ಅತ್ತ ಮೊಲವೂ ಹಣ್ಣಿನವನ ಕಣ್ಣು ತಪ್ಪಿಸಿ ಮಾಯವಾಯಿತು. ಅವನು ಹಿಂತಿರುಗಿ ಬಂದು ಖಾಲಿಬುಟ್ಟಿಯನ್ನು ನೋಡಿ ಮಹಾ ಚಿಂತೆಯಿದ ಹೊರಟುಹೋದ.

ಬಳಿಕ ಮೊಲವು ಕೋತಿಗಳಬಳಿಗೆ ಬಂದು "ಗೆಳೆಯರೆ, ಬಾಳೇ ಹಣ್ಣು ನನಗೆಲ್ಲಿದೆ?" ಎಂದು ಕೇಳಿತು. "ಇಗೋ ಇವೆಲ್ಲಾ ನಿನಗೇ ಇಟ್ಟಿದ್ದೇವೆ" ಎಂದು ಕೋತಿಗಳು ಅಲ್ಲಿ ಕುಪ್ಪೆ ಹಾಕಿದ್ದ ಸಿಪ್ಪೆಗಳನ್ನು ತೋರಿಸಿದುವು.

ಆಗಲೇ ಕೋತಿಗಳ ಮೋಸವನ್ನರಿತು ಮೊಲದ ಮುಖ ಚಿಕ್ಕದಾಯಿತು. ಅದನ್ನು ನೋಡಿ ದೊಡ್ಡ ಕೋತಿ "ಓ! ನಿನಗೆ ಬಾಳೇ

ಟಿ. ಶರತ್ಕುಮಾರಿ – ತಿಮ್ಮಂಗೂರು



ಹಣ್ಣಿನ ಸಿಪ್ಪೆಯಮೇಲೆ ಬಹಳ ಪ್ರೀತಿಯೆಂದು ನಾನುತಿಳಿದೆ. ಹೋಗಲಿ. ನಮ್ಮ ಮನೆಯಲ್ಲಿ ಗಡಿಗೆ ತುಂಬಾ ಜೇನಿದೆ. ಹೊಟ್ಟೆ ತುಂಬಾ ತಿನ್ನುವಿಯಂತೆ ಬಾ" ಎಂದಿತು.

ಈಗಲೂ ಮೊಲಕ್ಕೆ ಮಂಗಗಳ ಮೋಸ ಗೊತ್ತಾಗಲಿಲ್ಲ. ಪಾಪದ ಮೊಲವಲ್ಲವೆ? ಜೇನಿನಾಸೆಯಿಂದ ಕೋತಿಗಳ ಮರದಬುಡಕ್ಕೆ ಹೋಯಿತು. ಕೋತಿಗಳು ನಾಲ್ಕೂ ಚಂಗನೆ ಹಾರಿ ತಮ್ಮ ನಿವಾಸದ ಕೊಂಬೆಗಳಮೇಲೆ ಹೋದುವು. ಅಲ್ಲಿ ಒಂದು ದೊಡ್ಡಗಡಿಗೆಯ ತುಂಬಾ ಸಿಹಿಜೇನಿತ್ತು. ನಾಲ್ಕು ಕೋತಿಗಳೂ ಆ ಜೇನನ್ನು ತಿನ್ನಲಾರಂಭಿಸಿದುವು. ಮೊಲವು ಕೆಳಗೇ ಪಿಳಿ ಪಿಳಿ ನೋಡುತ್ತಿತ್ತು.

"ಏನು ಮೊಲವಣ್ಣಾ! ಬಾ. ಮರದ ಮೇಲೆ! ಆಹಾಹಾ! ಏನುಸಿಹಿ! ಅಮೃತ ಜೇನು! ಬಾ! ಬಾ!" ಎಂದು ಬಾಯಿ ಚಪ್ಪರಿಸುತ್ತಾ ಕರೆಯಿತು ಹಿರೀಕೋತಿ.

ಈಗ ತಾನೇ ಕೋತಿಗಳ ಮೋಸದಚೇಷ್ಟೆ ಮೊಲಕ್ಕೆ ಚೆನ್ನಾಗಿ ಗೊತ್ತಾಯಿತು. "ಇರಲಿ ಇದಕ್ಕೆ ತಕ್ಕ ಪ್ರತೀಕಾರಮಾಡದೆ ಬಿಡಲಾರೆ!" ಎಂದು ತನ್ನೊಳಗೆ ತಾನೇ ಹೇಳಿಕೊಂಡು ತನ್ನ ಬಿಲದಕಡೆಗೆ ಹೋಯಿತು.

ಸ್ವಲ್ಪ ಕಾಲದಮೇಲೆ ಆ ಅಡವಿಗೆ ಕೋತಿಗಳನ್ನು ಹಿಡಿಯುವ ಬೇಟೆಗಾರರು ಬಂದರು. ಕೋತಿಗಳು ತಮ್ಮ ಪ್ರಾಣವನ್ನು ರಕ್ಷಿಸಿಕೊಳ್ಳಬೇಕಾದರೆ ಆ ಅಡವಿಯನ್ನು ಬಿಟ್ಟೇ ಹೋಗಬೇಕಾಯಿತು. ಹೋಗುವಾಗ ಅವುಗಳು ಮೊಲದ ಬಿಲದ ಬಳಿಯಿಂದಾಗಿಯೇ ಹೋಗಬೇಕು. ಬೇರೆ ಮೂರು ದಿಕ್ಕುಗಳಲ್ಲಿಯೂ ಬೇಟೆಗಾರರು ಮುತ್ತಿಕೊಂಡಿದ್ದರು.

ಮೊಲಕ್ಕೂ ಈ ಸಮಾಚಾರ ಮುಂಚಿನ ದಿನವೇ ತಿಳಿಯಿತು. ಮೊಲವು ಅವುಗಳು ಬರುವ ದಾರಿಯಲ್ಲಿ ಸ್ವಲ್ಪದೂರಕ್ಕೆ ತರಗೆಲೆಗಳನ್ನು ಹರಡಿ, ರಾತ್ರಿಯ ಹೊತ್ತಿನಲ್ಲಿ ಅವುಗಳಿಗೆ ಬೆಂಕಿಕೊಟ್ಟಿತು. ತರಗೆಲೆಗಳು ಸುಟ್ಟು ಬೆಂಕಿಯೆಲ್ಲಾ ಆರಿ ಮಸಿಬೂದಿಯಾಗಿ ಹೋದುವು. ಆ ಮಸಿಯಜಾಡೆ ತಿಳಿಯದ ಹಾಗೆ ಅದರಮೇಲೆಲ್ಲಾ ಒಣ ಎಲೆಗಳನ್ನು ಹರಡಿ, ಮೊಲವು ಮಂಗಗಳ ದಾರೀಕಾಯುತ್ತ ಕುಳಿತಿತು.

ಆ ನಾಲ್ಕು ಮೋಸಗಾರ ಕೋತಿಗಳೂ ಆ

ದಾರಿಯಾಗಿ ಬಂದುವು. ಗೆಳೆಯ ಮೊಲವನ್ನು ನೋಡಿ ಅದರೊಡನೆ ತಮ್ಮ ಕಷ್ಟವನ್ನು ಹೇಳಿಕೊಂಡುವು.

ಮೊಲವು— "ಅಯ್ಯೋ! ಪಾಪ! ಎಂಥಾ ಕಷ್ಟ ಬಂತು ನಿಮಗೆ! ಗುರುತೂ ಪರಿಚಯ ವಿಲ್ಲದ ಯಾವ ದೇಶಕ್ಕೆ ಹೋಗು ವಿರೋ ಏನೋ! ಈ ಹೊತ್ತು ಇಲ್ಲಿಯೇ ಇದ್ದು ನನ್ನ ಔತಣವನ್ನು ಸ್ವೀಕಸಿಕೊಂಡು ಹೋಗಿ. ಮಿಂದು ಬನ್ನಿ" ಎಂದು ಮೊಲವು ಅವರಿಗೆ ಕೆರೆಯ ದಾರಿ ತೋರಿಸಿತು.

ಇದೆಲ್ಲಾ ನಿಜವೆಂದು ತಿಳಿದು ಕೋತಿಗಳು ಆ ದಾರಿಯಾಗಿ ಕೆರೆಯ ಬದಿಗೆ ಹೋದುವು. ಕೆರೆಯಲ್ಲಿ ಮಿಂದು, ಮೇಲೆ ಬಂದುವು. ಮೈಯನ್ನು ಒಣಗಿಸಿಕೊಳ್ಳಕ್ಕಾಗಿ ನೆಲದಲ್ಲಿ ಇರುವ ಒಣ ಎಲೆಗಳಮೇಲೆ ಹೊರಳಾಡಿದುವು. ಅಲ್ಲಿದ್ದ ಮಸಿ ಅವುಗಳ ಮೈಗೆಲ್ಲಾ ಅಂಟಿಕೊಂಡು ಕೋತಿಗಳು ಕಪ್ಪಗಾದುವು!

"ಇದೇನಪ್ಪಾ!" ಎಂದುಕೊಂಡು ಅವು ಪುನಃ ಕೊಳಕ್ಕೆ ಹೋಗಿ ಮುಳುಗು ಹಾಕಿ ಮತ್ತೆ ಬಂದು ನೆಲದಲ್ಲಿ ಉರುಳಿದುವು. ಒದ್ದೆ ಮೈಗೆ ಮಸಿ ಚೆನ್ನಾಗಿ ಹತ್ತಿಕೊಂಡು ಇನ್ನಷ್ಟು ಕಪ್ಪಾದುವು!

ಹೀಗೆ ಮೈಯನ್ನು ಮಸಿಮಾಡಿ ಕೊಳ್ಳುತ್ತಾ ಅದನ್ನು ಹೋಗಲಾಡಿಸಲಿಕ್ಕಾಗಿ ಮತ್ತೆ ಮತ್ತೆ ಕೆರೆಗೆ ಹೋಗಿ ಮೀಯುತ್ತಾ ಇರುವುದೇ ಅವುಗಳ ಕೆಲಸವಾಯಿತು.



ಇತ್ತ ಮೊಲ— "ಬನ್ನಿ ಬನ್ನಿ ಮಂಗಣ್ಣ ಗಳಿರಾ! ಎಷ್ಟು ಮಧುರವಾದ ಔತಣ ತಯಾರಿಸಿದ್ದೇನೆ! ಬೇಗ ಬನ್ನಿ!" ಎಂದು ಕರೆಯಿತು, ಒಳಗೊಳಗೇ ನಗುತ್ತಾ!

ಅಷ್ಟರಲ್ಲಿ ಬೇಟೆಗಾರರು ಆ ಸ್ಥಳಕ್ಕೇ ಬರುತ್ತಿರುವುದು ಕಾಣಿಸಿತು. ಕೋತಿಗಳು ತಿರುಗಿ ನೋಡದೆಯೇ ಆ ಸ್ಥಳವನ್ನು ಬಿಟ್ಟು ಓಡಿ ಹೋಗ ಬೇಕಾಯಿತು. ಆಗ ಅವುಗಳ ಮನಸ್ಸಿನಲ್ಲಿ ಹಿಂದಿನನೆನಪು ಬಂತು. "ಆದಿನ ನಾವು ಮೊಲಕ್ಕೆ ಮೋಸಮಾಡಿದೆವು. ಅದೀಗ ಹೀಗೆ ಚೇಷ್ಟೆಮಾಡಿ ಪ್ರತೀಕಾರಮಾಡಿತು. ಆಟಕ್ಕಾದರೂ ಒಬ್ಬರ ಮನಸ್ಸಿಗೆ ನೋವು ಮಾಡಬಾರದು!" ಎಂದು ಕೋತಿಗಳು ತಮಗೆ ತಾವೇ ಬುದ್ಧಿ ಹೇಳಿಕೊಂಡುವು.




ಒಂದು ಊರಿನಲ್ಲಿ ಒಬ್ಬ ರೈತನು ತನ್ನ ಹೆಂಡತಿಯೊಂದಿಗೆ ಸುಖವಾಗಿದ್ದನು. ಅವನಿಗೆ ಲಕ್ಷ್ಮಿ ಎಂಬ ಒಬ್ಬಳೇ ಮಗಳು. ಆದುದರಿಂದ ಅವಳನ್ನು ಅತ್ಯಂತ ಅಕ್ಕರೆಯಿಂದ ಬೆಳಸುತ್ತಿದ್ದರು.

ಯುಕ್ತ ವಯಸ್ಸು ಬಂದಾಗ ಲಕ್ಷ್ಮಿಗೆ ಮದುವೆಯಾಯಿತು. ಆ ರೈತ ದಂಪತಿಗಳು ತಮ್ಮ ಮಗಳುಲಕ್ಷ್ಮಿಗೆ ಬಹಳ ವೈಭವದಿಂದ ಮದುವೆ ಮಾಡಿದರು. ಅಷ್ಟುಗದ್ದಲದಮದುವೆ ಆಊರಿನಲ್ಲಿ ಬೇರೆಲ್ಲಿಯೂ ನಡೆದಿಲ್ಲ. ಅಳಿಯನಾಗಿ ಬಂದವನು ಬಹಳ ಸುಂದರನಾಗಿದ್ದ. ಅದಕ್ಕೆ ತಕ್ಕಂತೆ ಅವನ ಹೆಸರೂ 'ಸುಂದರಯ್ಯ' ಎಂದಿತ್ತು. ಎಲ್ಲರಿಗೂ ಈ ಮದುವೆ ತೃಪ್ತಿಕರವಾಗಿತ್ತು. ವಧೂವರರನ್ನುನೋಡಿ ರತಿಮನ್ಮಥರಂತಿದ್ದಾರೆ ಎಂದು ಎಲ್ಲರೂ ಅಂದುಕೊಂಡರು.

ಮದುವೆಯಾದ ಕೆಲವುದಿನಗಳ ಮೇಲೆ ಸುಂದರಯ್ಯ ತನ್ನ ಪತ್ನಿಯನ್ನು ಕರೆದುಕೊಂಡು ಹೋಗಲಿಕ್ಕಾಗಿ ಬಂದನು. 'ನಾಳೆಯೇ ಹೋಗಬೇಕು. ಕಳಿಸಿಕೊಡಿರಿ' ಎಂದು ಅವಸರಪಡಿಸಿದನು. "ಇಷ್ಟು ಅವಸರಪಡಿಸಿದರೆ ಹೇಗೆ? ಬೇಗದಲ್ಲೇ ದೀಪಾವಳಿ ಬರುತ್ತೆ. ಆ ಹಬ್ಬಕ್ಕೆ ನೀನೂ ಬಾ. ನಮ್ಮ ಹಬ್ಬದ ಉಡುಗೊರೆಗಳನ್ನೆಲ್ಲಾ ಸ್ವೀಕರಿಸಿಕೊಂಡು, ಆಮೇಲೆ ಕರಕೊಂಡು ಹೋಗಬಹುದು" ಎಂದು ಅತ್ತೆ—ಮಾವಂದಿರು ಎಷ್ಟು ಹೇಳಿದರೂ ಸುಂದರಯ್ಯ ಒಪ್ಪಲಿಲ್ಲ. ನಾಳೆಕರೆದುಕೊಂಡೇ ಹೋಗಬೇಕೆಂದು ಒಂದೇ ಪಟ್ಟು ಹಿಡಿದನು.

ಬೇರೆ ವಿಧಿಯಿಲ್ಲದೆ ಪುರೋಹಿತರನ್ನು ಕರೆಸಿ, ನಾಳೆ ಪ್ರಯಾಣಕ್ಕೆ ಒಳ್ಳೆಯದಿನವೋ ಹೇಗೆಂದು ನೋಡಿಸಿದರು. ಆಗ ಪುರೋಹಿತರು "ನಾಳೆ ನವಮಿ. ಪ್ರಯಾಣಕ್ಕೆ ಒಳ್ಳೆಯ ತಿಥಿಯಲ್ಲ. ದಶಮಿ ಒಳ್ಳೆಯದು. ನಾಡದ್ದು ದಶಮಿಯಂದು ಕಳಿಸಿಕೊಡಿರಿ" ಎಂದರು.

ಆದರೆ ಸುಂದರನು ಒಪ್ಪಿದರೆ ತಾನೆ? ಅವನಿಗೆ ಈ ತಿಥಿ–ವಾರ–ನಕ್ಷತ್ರಗಳಲ್ಲೆಲ್ಲ ನಂಬುಗೆಯಿಲ್ಲ. "ನಮ್ಮಮನೆಗೆ ನಾವು ಹೋಗಲಿಕ್ಕೆ ನವಮಿಯೇನು, ದಶಮಿಯೇನು? ನಾಳೆ ಕಳಿಸಿದಿರಾ ಸರಿ, ಇಲ್ಲದಿದ್ದರೆ ನಾನು ನಿಮ್ಮ

ಟಿ. ಪ್ರಭಾವತಿ ಕೋಟಿಕಾರ್, ಕುಂದಾಪುರ

ಹುಡುಗಿಯನ್ನು ಎಂದಿಗೂ ಕರೆದುಕೊಂಡು ಹೋಗಲಿಕ್ಕಿಲ್ಲ!" ಎಂದು ಹಟಹಿಡಿದನು.

ಬೇರೆ ಉಪಾಯಕಾಣದೆ ಅತ್ತೆ – ಮಾವಂದಿರು ಮರುದಿನವೇ ಲಕ್ಷ್ಮಿಯನ್ನು ಕಳುಹಿಸಲು ಏರ್ಪಾಡು ಮಾಡಿದರು. ದಾರಿಯಲ್ಲಿ ತಿನ್ನಲಿಕ್ಕೆ ತಿಂಡಿಗಳನ್ನೂ ಭಕ್ಷ್ಯಗಳನ್ನೂ ಅದೂ ಇದೂ ಸಿದ್ಧ ಪಡಿಸಿದರು.

ಮರುದಿನ ಬೆಳಗಾಗುತ್ತಲೇ ಲಕ್ಷ್ಮಿ ಹೊಸ ಸೀರೆ ರವಿಕೆಗಳಿಂದ ಅಲಂಕೃತಳಾಗಿ, ಹಿರಿಯರಿಗೆ ನಮಸ್ಕರಿಸಿ, ಬಟ್ಟೆ ತಿಂಡಿಗಳ ಗಂಟುಗಳನ್ನು ಎತ್ತಿಕೊಂಡು ಪತಿಯೊಂದಿಗೆ ಹೊರಟಳು.




ಸುಂದರಯ್ಯನು 'ನವಮಿಯೇನು, ದಶಮಿಯೇನು?' ಎಂದು ಅಲಕ್ಷ್ಯವಾಗಿ ಮಾತಾಡಿದ್ದು ನವಮೀದೇವನ ಕಿವಿಗೆ ಬಿದ್ದೇಬಿತ್ತು. ಕೋಪಬಂತು ಅವನಿಗೆ! ನವಮಿ ತಿಥಿಯ ಅಧಿದೇವನಲ್ಲವೆ ಅವನು?

ಒಂದೊಂದು ವಾರಗಳಿಗೆಸೂರ್ಯ, ಚಂದ್ರ ಮೊದಲಾದ ದೇವತೆಗಳು ಅಧಿಪತಿಗಳಾಗಿರುವಂತೆಯೇ ತಿಥಿಗಳಿಗೂ ಅಧಿದೇವತೆಗಳಿದ್ದರು. ನವಮೀ ದಿನದಲ್ಲಿ ಎಲ್ಲಿದ್ದವರು ಅಲ್ಲಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳುತ್ತಿರಬೇಕಲ್ಲದೆ ಬೇರೆ ಕಡೆಗೆ ಹೋಗಬಾರದು, ಎಂದು ನವಮೀದೇವನ ಶಾಸನವಾಗಿತ್ತು. ಆದುದರಿಂದಲೇ ಹಿರಿಯರು ನವಮಿ ದಿನದಲ್ಲಿ ಪ್ರಯಾಣಮಾಡಬಾರದೆಂದು ನಿಷೇಧಿಸುತ್ತಿದ್ದರು.

ಅದನ್ನೆಲ್ಲಾ ಧಿಕ್ಕರಿಸಿ ಸುಂದರಯ್ಯನು ನವಮಿದಿನ ಹೊರಟುಬಿಟ್ಟಿದ್ದರಿಂದ, ಪಾಪ, ಅವನು ನವಮೀದೇವನ ಆಗ್ರಹಕ್ಕೆ ಗುರಿಯಾಗಬೇಕಾಯಿತು. ನವಮಿದೇವನು ಅವನಿಗೆ ಬುದ್ಧಿ ಕಲಿಸಬೇಕೆಂದು ಅವನ ಬೆಂಬತ್ತಿಕೊಂಡನು.

ಲಕ್ಷ್ಮಿಯೂ ಸುಂದರಯ್ಯನೂ ಒಂದು ಪಟ್ಟಣದ ಸಮೀಪಕ್ಕೆ ಬರುವಾಗ ಮಧ್ಯಾಹ್ನವಾಯಿತು. ಇಬ್ಬರೂ ನೆರಳಿನಲ್ಲಿ ಕುಳಿತರು. ಲಕ್ಷ್ಮಿ ಕಟ್ಟಿಕೊಂಡು ಬಂದ ತಿಂಡಿಗಳನ್ನು ಗಂಡನಿಗೆ ಹಂಚಿ ತಾನೂ ಕೊಂಚ ತಿಂದಳು. ಆಮೇಲೆ ತಿರುಗಣೆ ತಂಬಿಗೆಯನ್ನು ಗಂಡನಿಗೆ ಕೊಟ್ಟು ನೀರುತರಲು ಕಳುಹಿಸಿದಳು. ತಿರುಗಣೆ ತಂಬಿಗೆಯೊಂದಿಗೆ ಸುಂದರಯ್ಯ ಊರಿನೊಳಗೆ ಹೋದನು.

ಹೊಂಚು ಹಾಕುತ್ತಲೇ ಇದ್ದ ನವಮಿದೇವನು, ಸುಂದರಯ್ಯನಂತೆಯೇ ರೂಪವನ್ನು ಧರಿಸಿದನು. ಮತ್ತು ನೀರುತುಂಬಿದ




ಅಂತಹುದೇ ಒಂದು ತಿರುಗಣೆ ತಂಬಿಗೆಯೊಂದಿಗೆ ಲಕ್ಷ್ಮಿಯಬಳಿಗೆ ಬಂದು, "ಇನ್ನು ಹೋಗೋಣ ಬಾ' ಎಂದನು. ಲಕ್ಷ್ಮಿಗೇನು ಗೊತ್ತು? ಇವನ ಕಂಠಸ್ವರವೂ ಸುಂದರನಂತೆಯೇ ಇದೆ! ಅವಳಿಗೇನೂ ಸಂದೇಹ ತೋರದೆ ಅವನೊಂದಿಗೆ ಹೊರಟಳು.

ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ನಿಜವಾದ ಸುಂದರಯ್ಯ ನೀರಿನೊಂದಿಗೆ ಬಂದು, ಲಕ್ಷ್ಮಿ ಇಲ್ಲದ್ದು ನೋಡಿ ಗಾಬರಿಯಾದನು. ಅತ್ತಿತ್ತ ಹುಡುಕಾಡಿದಾಗ, ದೂರದಲ್ಲಿ, ಆ ದಾರಿಯ ಕೊನೆಯಲ್ಲಿ ಲಕ್ಷ್ಮಿ ಉಟ್ಟಿದ್ದ ಸೀರೆಯ ಕೊನೆ ತೋರಿತು. ಸುಂದರಯ್ಯ ಬೇಗಬೇಗನೆ ಅಲ್ಲಿಗೆ ಓಡಿದನು.

ಮುಂದೆ ಹೋದಾಗ ಅವಳ ಜತೆಯಲ್ಲಿ ಇನ್ನೊಬ್ಬ ನಿರುವುದನ್ನು ನೋಡಿ ಇನ್ನಷ್ಟು ದಿಗಿಲುಬಿದ್ದನು. ಕೋಪದಿಂದ ರಭಸವಾಗಿ ಹೋಗಿ ಅವರಿಬ್ಬರ ಮುಂದೂ ಅಡ್ಡಗಟ್ಟಿ ನಿಂತನು.

"ಯಾರಯ್ಯಾ, ನೀನು? ಇವಳನ್ನು ಕರೆದುಕೊಂಡು ಎತ್ತ ಹೊರಟಿದ್ದಿ? ತಪ್ಪನ್ನು ಒಪ್ಪಿ ಕ್ಷಮಾಪಣೆ ಕೇಳುವಿಯಾ? ಅಲ್ಲ ನಿನ್ನ ತಲೆ ಒಡೆದು ಹಾಕಬೇಕೊ?" ಎಂದು ಸುಂದರಯ್ಯ ಗರ್ಜಿಸಿದನು.

ವೇಷಧಾರಿಯಾದ ನವಮಿದೇವನು ಆಶ್ಚರ್ಯವನ್ನೂ ಕೋಪವನ್ನೂ ತೋರಿಸುತ್ತ—"ಯಾರಯ್ಯಾ ನೀನು? ಹುಚ್ಚನೋ ಭ್ರಾಂತನೋ ಮದೋನ್ಮತ್ತನೊ? ನನ್ನ ಪತ್ನಿಯೊಂದಿಗೆ ನಾನು ನನ್ನ ಮನೆಗೆ ಹೋಗುತ್ತಿದ್ದರೆ, ಇವನಾರೋ ಕೇಳುತ್ತಾನೆ!" ಎಂದು ಮೂದಲಿಸಿದನು.

ಸುಂದರಯ್ಯ ಲಕ್ಷ್ಮಿಯೊಡನೆ ಮಾತಾಡಲಿಕ್ಕೆ ಹೋದನು. ಆದರೆ ಅವಳೇನು ಹೇಳಬೇಕು? ಇಬ್ಬರೂ ಒಂದೇರೂಪವಾಗಿರುವುದರಿಂದ, ಅವಳು ಪಿಕಿಮಿಕಿ ನೋಡುತ್ತ ನಿಶ್ಚೇಷ್ಟಿತೆಯಾದವಳಂತೆ ನಿಂತುಬಿಟ್ಟಳು!

"ಲಕ್ಷ್ಮಿ, ನೀನು ಮೋಸಹೋಗಬೇಡ. ಇವನಾರೋ ಮೋಸಗಾರ. ಇಕೋ ನನ್ನ ಹಣೆಯಲ್ಲಿರುವ ಮಚ್ಚೆಯನ್ನು ನೋಡು" ಎಂದು ಸುಂದರಯ್ಯ ತನ್ನ ಹಣೆಯ ಮಚ್ಚೆಯನ್ನು ತೋರಿಸಿದನು.

ಲಕ್ಷ್ಮಿ ನೋಡಿದಳು. ಇಬ್ಬರ ಹಣೆಯಲ್ಲಿಯೂ ಆ ರೀತಿಯ ಮಚ್ಚೆ ಇತ್ತು. ಅವಳು ಇನ್ನಷ್ಟು ಗಾಬರಿಯಾಗಿ ದೇವರಿಗೆ ಶರಣು ಹೊಡದಳು, "ದೇವರೆ! ಈದಿನ

ನವಮಿತಿಥಿ. ಪ್ರಯಾಣ ಮಾಡಬಾರದೆಂದು ಎಷ್ಟು ಹೇಳಿದರೂ ಇವರು ಕೇಳಲಿಲ್ಲ! ಈ ವಿಘ್ನದಿಂದ ನಮ್ಮನ್ನು ನೀನೇ ಕಾಪಾಡಬೇಕು" ಎಂದು ದೇವರಿಗೆ ಕೈಮುಗಿದಳು.

ಹೀಗೆ ಅಲ್ಲಿ ವಾದ-ವಿವಾದವಾಗುತ್ತಿದ್ದಾಗ, ಆ ಪಟ್ಟಣದ ರಾಜನು ಮಂತ್ರಿ ಪರಿವಾರದೊಂದಿಗೆ ವಿಹಾರಮಾಡುತ್ತ ಅಲ್ಲಿಗೇ ಬಂದನು. ಬಂದು, ಇವರನ್ನು ನೋಡಿ— "ಏನಿದು ಗಲಾಟೆ?" ಎಂದು ಕೇಳಿದನು.

ಲಕ್ಷ್ಮಿಯೇ ಹೇಳಿಕೊಂಡಳು, ಎಲ್ಲವನ್ನೂ ಸಂಕ್ಷೇಪವಾಗಿ ಅರಿಕೆಮಾಡಿಕೊಂಡು— "ಮಹಾಪ್ರಭು! ಈ ಇಬ್ಬರಲ್ಲಿ ನನ್ನ ಪತಿ ಯಾರೋ ತಿಳಿಯದಾಗಿದೆ. ಈ ಸಮಸ್ಯೆಯಿಂದ ತಾವೇ ನನ್ನನ್ನು ಉದ್ಧರಿಸಬೇಕು" ಎಂದು ಪ್ರಾರ್ಥಿಸಿಕೊಂಡಳು.

ಇದನ್ನು ಕೇಳಿ ರಾಜಗೆ ಏನೂ ತೋರಲಿಲ್ಲ. "ಎಲಯಲಾ! ಪುರಾಣದ ದಮಯಂತೀ ಸಮಸ್ಯೆಯಂತಿದೆಯಲ್ಲಾ! ಇದೇನಾಶ್ಚರ್ಯ!" ಎನ್ನುತ್ತಾ ರಾಜನು ಮಂತ್ರಿಯ ಮುಖವನ್ನು ನೋಡಿದನು.

ಮಂತ್ರಿ ಯೋಚಿಸುತ್ತಾ— "ಹೌದು; ಏನೋ ದೇವರಹಸ್ಯವಾಗಿದೆ! ದಮಂತಿಯ ಸ್ವಯಂವರಕ್ಕೆ ನಳರೂಪದಿಂದ ಬಂದ ಉಳಿದ ನಾಲ್ವರೂ, ಇಚ್ಛೆಯಂತೆ ರೂಪತಾಳುವ ದಿಕ್ಪಾಲದೇವತೆಗಳು. ಈ ಇಬ್ಬರಲ್ಲಿಕೂಡಾ ಒಬ್ಬನು ಅಂತಹ ದೇವತೆಯೇ ಆಗಿದ್ದಾನು. ಇದರಲ್ಲಿ ಯಾರು ದೇವತೆಯೋ ಯಾರು




ಮಾನವನೋ ಕಂಡುಹಿಡಿಯ ಬೇಕಾದರೆ ಮನುಷ್ಯರಿಗೆ ಸಾಧ್ಯವಾಗದ ಒಂದು ಕೆಲಸವನ್ನು ಇಬ್ಬರಿಗೂ ಹೇಳಬೇಕು" ಎಂದು ಕೊಂಡು ಅವರಿಬ್ಬರನ್ನೂ ಬಳಿಗೆ ಕರೆದನು. ಬಳಿಕ— "ನಿಮ್ಮಿಬ್ಬರಲ್ಲಿ ಯಾರು ಈ ತಂಬಿಗೆಯೊಳಗೆ ಪ್ರವೇಶಿಸಿ ಹೊರಗೆ ಬರುವಿರೋ ಅವನೇ ಇವಳ ಪತಿ" ಎಂದು ಹೇಳಿದನು.

ಇದನ್ನು ಕೇಳಿ ನವಮಿದೇವನಿಗೆ ಬಹಳ ಸಂತೋಷದಿಂದ ಮುಖವರಳಿತು. "ಅಷ್ಟೆ ತಾನೇ? ಇಕೋ ನೋಡು. ಎಲ್ಲರೂನೋಡಿರಿ!" ಎಂದು ನವಮಿದೇವನು ಆ ತಿರುಗಣೆ ತಂಬಿಗೆಯೊಳಗೆ ತನ್ನ ಕಾಲುಗಳನ್ನು ತೂರಿಸಿದನು. ಈ ಯುಕ್ತಿಯಿಂದ ಸುಂದರಯ್ಯನನ್ನು ಇನ್ನೂ ದೊಡ್ಡ ಸಂಕಟದಲ್ಲಿ ಸಿಕ್ಕಿಸಬಹುದೆಂದು ಬಹಳ ಉಬ್ಬಿನಿಂದ, ನವಮಿದೇವನು

ಚಪ್ಪಂತ ತಂಬಿಗೆಯೊಳಗೆ ಕುಳಿತು, ದಬಕ್ಕನೆ ಹೊರಗೆಬಂದು, ಗೆಲುವಿ ನಿಂದ ನಿಂತನು !!

"ಇನ್ನೇನು ಈಗ ನಿರ್ಧಾರಣವಾಯಿತಷ್ಟೆ? ಬಾ ಲಕ್ಷ್ಮಿ. ನಾನೇ ನಿನ್ನ ಪತಿ ಎಂದು ಮಂತ್ರಿಗಳು ನಿರ್ಧರಿಸಿ ತೀರ್ಪಿಸಿಬಿಟ್ಟರು. ಇನ್ನು ಯೋಚನೆ ಏನಿದೆ? ನಡೆಹೋಗೋಣ" ಎಂದನು ನವಮಿದೇವ.

ಕೂಡಲೇ ಲಕ್ಷ್ಮಿ ಅವನ ಪಾದಕ್ಕೆ ಬಿದ್ದು— "ಸ್ವಾಮಿ! ನೀವಾರೋ ಏಕೋ ನಮ್ಮನ್ನು ಪರೀಕ್ಷಿಸಲಿಕ್ಕಾಗಿ ಬಂದ ದೇವತೆಗಳೇ ಹೊರತು ಮನುಷ್ಯರಲ್ಲ. ಮನುಷ್ಯರಿಂದ ಇಂತಹ ಅಸಾಧ್ಯಕೆಲಸ ವಾದೀತೆ? ನಾವೇನೋ ತಪ್ಪುಮಾಡಿರಬೇಕು. ನಮ್ಮನ್ನು ಶಿಕ್ಷಿಸಲಿಕ್ಕೆ ತಾವು ಬಂದಿದ್ದೀರಿ. ಪರೀಕ್ಷೆ ಸಾಕು ದೇವಾ! ನಮ್ಮನ್ನು ಕಾಪಾಡಬೇಕು. ನನಗೆ ಪತಿದಾನಮಾಡಬೇಕು" ಎಂದು ಪ್ರಾರ್ಥಿಸಿ ಕೊಂಡಳು.

ನವಮಿದೇವನು ಅವಳಮೇಲೆ ಕನಿಕರ ಗೊಂಡನು. ಕೂಡಲೇ ನಿಜರೂಪದಿಂದ ಪ್ರತ್ಯಕ್ಷನಾಗಿ— "ಲಕ್ಷ್ಮೀ! ತಪ್ಪುಮಾಡಿವವಳು ನೀನಲ್ಲ. ನಿನ್ನ ಪತಿ. ನಾನು ಯಾರು ಗೊತ್ತೆ? ನವಮಿದೇವ. ನನ್ನ ದಿನದಲ್ಲಿ ಪ್ರಯಾಣಮಾಡಕೂಡದೆಂದು ಹಿರಿಯರು ಎಷ್ಟು ಹೇಳಿದರೂ ಇವನು ಧಿಕ್ಕರಿಸಿ ಹೊರಟು ನನಗೆ ಕೋಪವುಂಟುಮಾಡಿದನು !" ಎಂದನು.

ಒಡನೆಯೇ ಸುಂದರಯ್ಯ ನವಮಿದೇವನ ಪಾದಕ್ಕೆ ಸಾಷ್ಟಾಂಗನಮಸ್ಕಾರಮಾಡಿ— "ಬುದ್ಧಿಬಂತು ದೇವಾ! ಇನ್ನೆಂದೂ ಹಿರಿಯರ ಮಾತನ್ನು ಮೀರುವುದಿಲ್ಲ!" ಎಂದು ಬೇಡಿಕೊಂಡನು.

ನವಮಿದೇವನು ಶಾಂತನಾಗಿ ಆ ದಂಪತಿಗಳನ್ನು ಆಶೀರ್ವದಿಸಿ ಅದೃಶ್ಯನಾದನು.

ಆಗ ಲಕ್ಷ್ಮಿ ಪತಿಯೊಂದಿಗೆ, "ಇನ್ನು ಬನ್ನಿ ಹೋಗೋಣ" ಎಂದಳು. ಅದಕ್ಕೆ ಸುಂದರಯ್ಯ— "ಬೇಡ. ಹಿಂದಕ್ಕೆ ತಿರುಗೋಣ. ನಾಳೆ ದಶಮಿದಿನವೇ ಪ್ರಯಾಣ ಮಾಡುವ" ಎಂದು ಹೇಳಿ, ಅವಳನ್ನು ಕರೆದುಕೊಂಡು ಅವಳ ತೌರುಮನೆಗೇ ಹಿಂದೆ ಬಂದು ಸೇರಿದನು.



# ಸಂಗೀತ ವಿದ್ವಾಂಸರು





ಮೊತ್ತಮೊದಲು ಶಿವನ ಢಮರುಕದಿಂದ ಸಂಗೀತವು ಹುಟ್ಟಿತು. ಈ ಸಂಗೀತವನ್ನು ಪ್ರಪಂಚದೊಳಗೆಲ್ಲಾ ವ್ಯಾಪಿಸಬೇಕೆಂದು ಶಿವನು ನೆನೆಸಿದನು. ಸಾಹಿತ್ಯಕ್ಕೆ ಸರಸ್ವತಿ ಹೇಗೆ ಅಧಿದೇವತೆಯಾಗಿರುವಳೋ ಹಾಗೆಯೇ ಸಂಗೀತಕ್ಕೂ ತಕ್ಕ ಹಿರಿಯರನ್ನು ನಿಯಮಿಸ ಬೇಕೆಂದು ಪರಮಶಿವನು ತುಂಬುರು-ನಾರದ ರನ್ನು ಕರೆಯಿಸಿ, ಅವರಿಗೆ ಸಂಗೀತ ವಿದ್ಯೆ ಯನ್ನು ಕಲಿಸಿಕೊಟ್ಟನು.

ಆ ಇಬ್ಬರಲ್ಲಿ ತುಂಬುರು ದೇವಲೋಕ ದಲ್ಲಿಯೂ, ನಾರದನು ಭೂಲೋಕದಲ್ಲಿಯೂ ಸಂಚಾರಮಾಡಿ ಸಂಗೀತವನ್ನು ಪ್ರಚಾರ ಪಡಿಸಬೇಕೆಂದು ನಿಶ್ಚಯವಾಯಿತು.

ಹೀಗೆ ಶಿವನಿಂದ ಆಜ್ಞಪ್ತರಾಗಿ ಹೊರಟ ಅವರಿಗೆ ತಮ್ಮೊಳಗೇ ಒಂದು ಮಾತುಬಂತು. 'ತುಂಬುರು-ನಾರದರೊಳಗೆ ಹೆಚ್ಚಿನ ಸಂಗೀತ ವಿದ್ವಾಂಸನಾರು?' ಎಂಬುದೇ ಆ ಸಂದೇಹ. ಇಬ್ಬರೂ ಸಾಹಿತ್ಯಾಧಿದೇವತೆಯಾದ ಸರಸ್ವ ತಿಯ ಬಳಿಗೆ ಹೋಗಿ, ನಿರ್ಣಯವನ್ನು ಕೇಳಿ ದರು. ಸರಸ್ವತಿ ಇಬ್ಬರ ಸಂಗೀತವನ್ನೂ ಕೇಳಿ, ಏನೂ ಹೇಳಲು ತೋರದೆ "ನೀವಿಬ್ಬರೂ ದೊಡ್ಡ ವಿದ್ವಾಂಸರಾಗಿದ್ದೀರಿ" ಎಂದುಬಿಟ್ಟಳು.

ಇದರಿಂದ ತೃಪ್ತರಾಗದೆ ಅವರಿಬ್ಬರೂ ಕೈಲಾಸಕ್ಕೇ ಹೋಗಿ ಶಿವನನ್ನೇ ಕೇಳಿದರು. ಶಿವನು ಪಾರ್ವತಿಯ ಮುಖವನ್ನು ನೋಡಿದ. ಪಾರ್ವತಿ ಅವರಿಬ್ಬರ ಸಂಗೀತವನ್ನೂ ಕೇಳಿ "ಇಬ್ಬರೂ ದೊಡ್ಡ ವಿದ್ವಾಂಸರೇ ಸರಿ" ಎಂದಳು. ಆದರೆ ಈ ಉತ್ತರದಿಂದ ತುಂಬುರು-ನಾರದರಿಗೆ ತೃಪ್ತಿಯಾದರೆತಾನೆ? ಆಗ ಪಾರ್ವತಿ ಯೆಂದಳು :—"ಅಯ್ಯಾ ವಿದ್ವಾಂ ಸರೆ, ಸಂಗೀತವಿದ್ಯೆಯಲ್ಲಿ ಮಹಾನಿಧಿಯಾ ಗಿರುವ ಆಂಜನೇಯನು ಈಗ ಹಿಮಾಲಯ ಪರ್ವತದಲ್ಲಿ ತಪಸ್ಸುಮಾಡುತ್ತಿದ್ದಾನೆ. ನೀವು ಹೋಗಿ ಅವನ ಇದಿರಿನಲ್ಲಿ ಹಾಡಿದಿರೆಂದರೆ ನಿಮಗೆ ನಿರ್ಣಯ ತಿಳಿದು ಹೋಗುತ್ತದೆ" ಎಂದು ಯೋಚನೆ ಹೇಳಿದಳು.

ಒಡನೆಯೇ ತುಂಬುರು-ನಾರದರು ಹಿಮಾ ಲಯಕ್ಕೆ ಹೋದರು. ಅಲ್ಲಿ ತಪಸ್ಸಿನಲ್ಲಿ ಮಗ್ನ ನಾಗಿದ್ದ ಹನುಮಂತನನ್ನು ಎಬ್ಬಿಸಿ, "ಹನು ಮಾನ್, ನೀವು ಸಂಗೀತದಲ್ಲಿ ಮಹಾನಿಧಿ

ಯು. ಸತ್ಯನಾರಾಯಣ - ಕಡೂರು

ಯೆಂದು ಕೇಳಿ ಬಂದೆವು. ನಾವಿಬ್ಬರೂ ಬೇರೆ ಬೇರೆ ಹಾಡುತ್ತೇವೆ. ನೀವು ಶ್ರದ್ಧೆಯಿಂದ ಲಾಲಿಸಿ ನಮ್ಮಿಬ್ಬರಲ್ಲಿ ಯಾರು ಹೆಚ್ಚಿನ ವಿದ್ವಾಂಸರೆಂದು ಹೇಳಬೇಕು" ಎಂದು ಕೋರಿಕೊಂಡರು.

ಹನುಮಂತನು ಕಿರುನಗೆ ನಗುತ್ತಾ— "ಓಹೋ! ನೀವಿಬ್ಬರೂ ಸ್ಪರ್ಧಿಸಿಕೊಂಡು ಬಂದಿದ್ದೀರಾ? ಒಳ್ಳೆಯದು. ನಿಮ್ಮ ವೀಣೆಗಳನ್ನು ಹೀಗೆ ಕೊಡಿರಿ ಎಂದನು. ತುಂಬುರು ತನ್ನ 'ಕಳಾವತಿ' ಎಂಬ ವೀಣೆಯನ್ನೂ, ನಾರದನು ತನ್ನ 'ಮಹತಿ' ಎಂಬ ವೀಣೆಯನ್ನೂ ಮಾರುತಿಯ ಕೈಗಿತ್ತರು.

ತಮ್ಮ ಹಾಡುಗಳನ್ನು ಕೇಳಿ ತೀರ್ಪು ಹೇಳುವನೆಂದು ತುಂಬುರು - ನಾರದರು ಎದುರು ನೋಡಿದರು. ಇಲ್ಲ. ಹನುಮಂತನು ಅವರನ್ನು ಹಾಡುವಂತೆ ಹೇಳಲೇ ಇಲ್ಲ. ಬದಲಾಗಿ ಹನುಮಂತನೇ ಹಾಡಲಾರಂಭಿಸಿದನು.

ಆಂಜನೇಯನ ಮುಖದಿಂದ ಸಂಗೀತವು ಪ್ರವಾಹವಾಗಿ ಹೊರಟಿತು. ನೋಡ ನೋಡುತ್ತಿದ್ದಂತೆ ಆ ಬೆಟ್ಟದಮೇಲಿನ ಶಿಲೆ ಕಲ್ಲುಗಳು ಕರಗಿ ನೀರಾಗಿ ಕಾಲುವೆಗಳಾಗಿ ಹರಿಯತೊಡಗಿದುವು. ಬಳಿಕ ಮಾರುತಿ ತನ್ನ ಕೈಯಲ್ಲಿದ್ದ ವೀಣೆಗಳನ್ನು ಆ ಕಾಲುವೆಯ ಮಧ್ಯಕ್ಕೆ ಬಿಸುಟುಬಿಟ್ಟನು. ಇದನ್ನು ನೋಡಿ ತುಂಬುರು - ನಾರದರು ಬೆಚ್ಚಿಬಿದ್ದರು. ಮತ್ತೆ ಕೊಂಚ ಹೊತ್ತಿಗೆಲ್ಲಾ ಕಾಲುವೆಯಾಗಿ ಹರಿದ ಶಿಲೆಗಳೆಲ್ಲಾ ಗಟ್ಟಿಯಾಗಿ ಶಿಲೆಗಳೇ ಆದುವು. ಪಾಪ, ತುಂಬುರು - ನಾರದರ ವೀಣೆಗಳು ಆ ಬಂಡೆಗಳ ಅಡಿಯಲ್ಲಿ ಸಿಕ್ಕಿಹೋದುವು.

ಹನುಮನು ಈಗ ನಿಮ್ಮ ಸಂಗೀತ ಪ್ರಭಾವದಿಂದ ಆ ಬಂಡೆಗಳನ್ನು ಕರಗಿಸಿ ನಿಮ್ಮ ವೀಣೆಗಳನ್ನು ಎತ್ತಿಕೊಳ್ಳಿರಿ ಎಂದನು.

ಅದು ಅವರಿಬ್ಬರಿಂದಲೂ ಸಾಗದೇಹೋಯಿತು. ನಾಚಿಕೊಂಡರು.

ಹನುಮಂತನು ಪುನಃ ಹಾಡಿ ಬಂಡೆಗಳನ್ನು ಕರಗಿಸಿ, ಅಲ್ಲಿಂದ ಅವರ ವೀಣೆಗಳನ್ನು ಎತ್ತಿ ಅವರಿಗೆ ಕೊಡುತ್ತಾ— "ನೀವಿಬ್ಬರೂ ಈಶ್ವರನ ಆಜ್ಞೆಯನ್ನು ನೆರವೇರಿಸಲು ಹೊರಟಿದ್ದೀರಿ. ಇಬ್ಬರೂ ಸಮಾನರೆಂದೇ ತಿಳಿದುಕೊಂಡು ನಿಮ್ಮ ನಿಮ್ಮ ಕರ್ತವ್ಯಮಾಡಿರಿ" ಎಂದು ಹಿತವಚನವನ್ನು ಹೇಳಿ ಕಳುಹಿಸಿದನು.



1

2





# ಇಂದಿನ ಮಕ್ಕಳು  ಮುಂದಿನ ಜನಾಂಗ





3

4

1. ಚಿ. ಶ್ರೀನಿವಾಸಮೂರ್ತಿ, ಬೆಂಗಳೂರು
2. ಚಿ. ಉಷಾ, ಬೆಂಗಳೂರು
3. ಚಿ. ರಾಧಾ, ಬೆಂಗಳೂರು
4. ಚಿ. ನಾಗೇಶ್ವರರಾವ್, ಬೆಜವಾಡ

## ಮುಖಪುಟದ ಚಿತ್ರ

ಹಿಂದೆ ದ್ವಾಪರಾಯುಗದಲ್ಲಿ ನರಕಾಸುರನೆಂಬ ರಾಕ್ಷಸನ ಬಾಧೆಯಿಂದ ಲೋಕವೆಲ್ಲಾ ತತ್ತಳಗುಟ್ಟಿತು. ಹೆತ್ತ ತಾಯಿಯ ಹೊರತು ಬೇರೆ ಯಾರಿಂದಲೂ ಮರಣವಿಲ್ಲದಂತೆ ಅವನು ವರಪಡೆದಿದ್ದ. ಇದರಿಂದ ಕೊಬ್ಬಿಹೋದ ಅವನ ಕ್ರೂರಕರ್ಮವನ್ನು ತಾಳಲಾರದೆ ಪ್ರಜೆಗಳೆಲ್ಲಾ ಬಂದು ಕೃಷ್ಣನೊಡನೆ ಮೊರೆಯಿಟ್ಟುಕೊಂಡರು. ಆರ್ತರಕ್ಷಕನಾದ ಕೃಷ್ಣನು ಜನರಿಗೆ ಅಭಯವಿತ್ತು, ನರಕಾಸುರನಮೇಲೆ ಯುದ್ಧಕ್ಕೆ ಹೊರಟನು.

ಆ ಘೋರ ರಾಕ್ಷಸನಿಂದ ತನ್ನ ಪತಿಗೆ ಅಪಾಯವಾಗದಂತೆ ನೋಡಿಕೊಳ್ಳಲು ತಾನೂ ಬರುವೆನೆಂದು ಹಟಹಿಡಿದು ಸತ್ಯಭಾಮೆಯೂ ಕೃಷ್ಣನೊಂದಿಗೆ ಹೊರಟಿದ್ದಳು.

ನರಕಾಸುರನಿಗೂ ಕೃಷ್ಣನಿಗೂ ಮಹಾಯುದ್ಧವಾಯಿತು. ಕೃಷ್ಣನ ಬಾಣಗಳೆಲ್ಲವೂ ನಿರರ್ಥಕವಾದುವು. ಅಲ್ಲದೆ ನರಕಾಸುರನ ಬಾಣದಿಂದ ಕೃಷ್ಣನು ಮೂರ್ಛಿತನಾಗಿಬಿದ್ದನು. ಮತ್ತೊಂದು ಬಾಣವು ಕೃಷ್ಣನನ್ನು ಕೊಲ್ಲಲಿಕ್ಕಾಗಿ ಓಡಿಬರುತ್ತಿತ್ತು. ತತ್ಕ್ಷಣವೇ ವೀರಸ್ತ್ರೀಯಾದ ಸತ್ಯಭಾಮೆ ಮಿಂಚಿನವೇಗದಿಂದ ಪ್ರತಿಬಾಣವನ್ನು ಹೂಡಿ ಪ್ರಯೋಗಿಸಿಬಿಟ್ಟಳು. ಆ ಬಾಣವು ನರಕಾಸುರನ ಬಾಣವನ್ನು ಮುರಿದುಹಾಕಿ ಹೋಗಿ ಅವನ ಎದೆಯನ್ನು ಸೇರಿತು! ಅವನು "ಹಾ! ತಾಯೀ!" ಎಂದು ಕೂಗುತ್ತಾ ಭೂಮಿಗೆ ಬಿದ್ದನು. ಅದನ್ನು ಕೇಳಿ ಸತ್ಯಭಾಮೆಗೂ ಮತ್ತೆಲ್ಲರಿಗೂ ಆಶ್ಚರ್ಯವಾಯಿತು. ಕೃಷ್ಣನು ಮೂರ್ಛೆತಿಳಿದೆದ್ದನು. ನರಕಾಸುರನು "ತಾಯೀ! ತಾಯೀ!" ಎಂದು ಕೂಗುತ್ತಲೇ ಇದ್ದಾನೆ.

ಕೃಷ್ಣನೂ ಸತ್ಯಭಾಮೆಯೂ ನರಕಾಸುರನಬಳಿಗೆ ಹೋದರು. ತ್ರಿಕಾಲಜ್ಞಾನಿಯಾದ ಕೃಷ್ಣನು ಎಲ್ಲರಿಗೂ ತಿಳಿಯುವಂತೆ ಪೂರ್ವವೃತ್ತಾಂತವನ್ನು ಹೇಳಿದನು.

ಹಿಂದೆ ಹಿರಣ್ಯಾಕ್ಷನು ಭೂದೇವಿಯನ್ನು ಎತ್ತಿಕೊಂಡು ಸಮುದ್ರದೊಳಗೆ ಮುಳುಗಿದಾಗ ವಿಷ್ಣು ವರಾಹಾವತಾರವನ್ನೆತ್ತಿ ಹಿರಣ್ಯಾಕ್ಷನನ್ನು ಸಂಹರಿಸಿ ಭೂದೇವಿಯನ್ನು ವರಿಸಿದನು. ಬಳಿಕ ಭೂದೇವಿಗೆ ಹುಟ್ಟಿದ ಮಗನೇ ಈ ನರಕಾಸುರ. ಆ ಭೂದೇವಿಯೇ ಈ ಸತ್ಯಭಾಮೆ. ನರಕಾಸುರನು ತನ್ನ ತಾಯಿಯಹೊರತು ಬೇರೆ ಯಾರಿಂದಲೂ ತನಗೆ ಮರಣ ವಿಲ್ಲದಂತೆ ವರಪಡೆದಿದ್ದ. ಅದೀಗ ತೀರಿತು. ಇದನ್ನು ವಿವರಿಸಿ ಕೃಷ್ಣನು ನರಕಾಸುರನನ್ನು ಕುರಿತು, "ಈಗ ನಿನಗೇನು ವರ ಬೇಕು?" ಎಂದು ಕೇಳಿದನು. "ನಾನು ಸತ್ತ ಈ ದಿನವು ನರಕಚತುರ್ದಶಿ ಎಂದು ಲೋಕದಲ್ಲಿ ಹಬ್ಬವಾಗಿ ನೆಲೆಸಬೇಕು" ಎಂದು ವರ ಕೇಳಿದನು ನರಕಾಸುರ. ಕೃಷ್ಣನು ಹಾಗೆಯೇ ಆಗಲೆಂದು ಅನುಗ್ರಹಿಸಿದನು.

ಬಾದಷಹನು ಮಾತ್ರವಲ್ಲ, ರಾಜ್ಯದೊಳಗಿನ ಜನರೆಲ್ಲಾ ಬಂದು ಬಂದು ಯಾಂತ್ರಿಕ ಪಕ್ಷಿಯ ಗಾನವನ್ನು ಕೇಳಿ ಆನಂದಿಸುತ್ತಿದ್ದರು.

ಒಂದುದಿನ ರಾತ್ರಿ ಬಾದಷಹನ ಶಯ್ಯಾಗೃಹದಲ್ಲಿ, ಅಂತಃಪುರಪಕ್ಷಿಯಾಗಿದ್ದ ಆ ಯಾಂತ್ರಿಕಪಕ್ಷಿ ಹಾಡುತ್ತಿದ್ದಾಗ "ಹರ್ರ್ರ್ರ್ರ್" ಎಂದೊಂದು ವಿಚಿತ್ರ ಶಬ್ದವಾಯಿತು. ಒಡನೇ ನಿಶ್ಶಬ್ದವಾಯಿತು. ಗಾನವೂ ನಿಂತುಹೋಯಿತು.

ಇದರಿಂದ ಬಾದಷನಿಗೆ ಆಶಾಭಂಗವಾಗಿ ಬೇಸರವಾಯಿತು. ಆಸ್ಥಾನದಲ್ಲಿದ್ದ ನಿಪುಣರೆಲ್ಲಾ ಸೇರಿ, ಆ ಯಾಂತ್ರಿಕಪಕ್ಷಿಯನ್ನು ಹಾಗೂ ಹೀಗೂಮಾಡಿ ಸರಿಮಾಡಿಬಿಟ್ಟರು. ಇದನ್ನೆಲ್ಲಾ ನೋಡಿದ ಸೂಕ್ಷ್ಮಜ್ಞನಾದ ಬಡಗಿಯೊಬ್ಬ ಏನು ಹೇಳಿದನೆಂದರೆ: "ಪ್ರಭೂ ಈ ಯಾಂತ್ರಿಕಪಕ್ಷಿಯನ್ನು ವರುಷಕ್ಕೊಂದು ಬಾರಿ ಮಾತ್ರ ಕೊಂಚವಾಗಿ ಉಪಯೋಗಿಸಬೇಕೇ ಹೊರತು, ಹೆಚ್ಚಾದರೆ ಏನಾಗುತ್ತೋ!" ಎಂದನು.

"ಈ ಮಾತು ಪರ್ಷಿಯಾ ದೇಶಕ್ಕೇ ಒಂದು ಕಳಂಕ! ಇದಕ್ಕಿಂತ ಹೆಚ್ಚಿನ ಅವಮಾನ ಇನ್ನೇನಿದೆ?" ಎನ್ನುತ್ತಾ ಆಸ್ಥಾನ ಗಾಯಕನು ಬಹಳ ಕಷ್ಟದಿಂದ ಉಪನ್ಯಾಸ ಮಾಡಿ—"ಈ ಯಾಂತ್ರಿಕಪಕ್ಷಿ ಎಂದಿನಂತೆ ಹಾಡುತ್ತಲೇ ಇದೆ" ಎಂದು ಬಹಿರಂಗ ಸಭೆಯಲ್ಲಿ ಘಂಟಾಘೋಷವಾಗಿ ಹೇಳಿದನು.

## ಚಿಂಬದಿಚಿ ಚಿತ್ರ

ಐದುವರ್ಷ ಕಳೆಯಿತು. ಬಾದಷಹನು ಮಂಚ ಹಿಡಿದನು. ಪರಿಸ್ಥಿತಿ ನೋಡುವಾಗ ಅವನು ಏಳುವಂತೆ ಕಾಣಲಿಲ್ಲ. ಆದುದರಿಂದ ಅವನಸ್ಥಾನದಲ್ಲಿ ಹೊಸ ಬಾದಷಹನು ಬಂದನು. ದರ್ಬಾರಿನಲ್ಲಿ ಪ್ರಮುಖರೆಲ್ಲಾ ಸೇರಿ ಹೊಸ ಬಾದಷಹನನ್ನು ಅಭಿನಂದಿಸಲಿದ್ದರು. ಹಳೆಯ ಬಾದಷಹನು ತೆರೆಯಮರೆಯಲ್ಲಿದ್ದಾನೆಯೇ ಹೊರತು ಮರಣಿಸಲಿಲ್ಲ.

ಆಸ್ಥಾನದಲ್ಲಿ ಸೇರಿದವರೆಲ್ಲರೂ ಹೊಸ ಬಾದಷಹನನ್ನು ಸನ್ಮಾನಿಸುವುದರಲ್ಲಿ ಗಡಿಬಿಡಿಗೊಳ್ಳುತ್ತಿದ್ದರು. ಜಯಜಯಾಕಾರಗಳೆಲ್ಲಾ ಹಳೆಯ ಬಾದಷಹನ ಕಿವಿಗೆ ಬೀಳುತ್ತಲೇ ಇದ್ದುವು. ಕೇಳುತ್ತಾ ಅವನಿಗೆ ಬೆವರು ಹರಿಯುತ್ತಿತ್ತು. ಶ್ವಾಸ ಬಿಗಿದಂತಾಯಿತು! "ತಾಳಲಾರೆ!" ಎಂದನು ಭಾರಸ್ವರದಿಂದ.

ಆಗ ಅವನು ಎದುರಿನಲ್ಲಿದ್ದ ಯಾಂತ್ರಿಕ ಪಕ್ಷಿಯೊಡನೆ "ಎಲೇ ಮುದ್ದುಪಕ್ಷಿ! ನಿನಗೆ ಯಾವಲೋಪವೂ ಇಲ್ಲದಂತೆ ಸಕಲಸದುಪಾಯಗಳನ್ನೂ ಮಾಡಿದೆ. ಈಗ ಹಾಡೆಂದು ಆಜ್ಞಾಪಿಸುತ್ತೇನೆ" ಎಂದನು. ಹಾಡೂ ಇಲ್ಲ, ಮಾತೂ ಇಲ್ಲ. ತಿರುಗಿಸುವವರು ಯಾರೂ ಇಲ್ಲದ್ದರಿಂದ ಅದು ಮೂಕವಾಗಿಯೇ ಇತ್ತು.

# ಇಂದ್ರ

## ಗಿಡ್ಡನು ಉದ್ದಾಗುವುದು

ಈ ಇಂದ್ರಜಾಲದಿಂದ ಯಾವನಾದರೂ ತನ್ನ ಸಹಜವಾದ ಉದ್ದಕ್ಕಿಂತಲೂ ಉದ್ದವಾಗಿ ಕಾಣಿಸಬಹುದು. ಆರು ಅಡಿ ಉದ್ದದವನು ಒಮ್ಮೆಗೇ ಏಳೆಂಟು ಅಡಿ ಉದ್ದವಾಗಿ ಕಾಣಿಸುವುದು ಬಹಳ ಆಶ್ಚರ್ಯವಲ್ಲವೆ? ಆದರೆ ಇದು ಸುಲಭ. ಕೆಳಗಿನ ಚಿತ್ರವನ್ನು ನೋಡುತ್ತಲೇ ಇದರ ಗುಟ್ಟು ಗೊತ್ತಾದೀತು.

ಮೊದಲು ಐಂದ್ರಜಾಲಿಕನು ತಾನು ಸಹಜವಾಗಿ ಧರಿಸುವ ಕೋಟು-ಪ್ಯಾಂಟುಗಳಿಗಿಂತಲೂ ಸಡಿಲಾಗಿಯೂ ಉದ್ದವಾಗಿಯೂ ಇರುವುವುಗಳನ್ನು, ಒರಟು ವಸ್ತ್ರದಿಂದ ಅಥವಾ ಉಣ್ಣೆಯ ಬಟ್ಟೆಯಿಂದ ಒಂದುಜತೆ ಹೊಲಿಸಿಟ್ಟುಕೊಂಡಿರಬೇಕು. ಪ್ಯಾಂಟಿನ ಕಾಲಿನಕಡೆಯಲ್ಲಿ ಹಿಂಬದಿಯ ಸ್ವಲ್ಪಭಾಗವನ್ನು ಹೊಲಿಯದೆ, ಹಿಂದಿನಿಂದ ಇನ್ನೊಬ್ಬರ ಕಾಲುಗಳನ್ನು ಅದರೊಳಗೆ ದೂರಿಸುವಂತೆ ಇರಬೇಕು. ಈ ಪ್ರದರ್ಶನಕ್ಕೆ ಇಬ್ಬರುಬೇಕು. ರಂಗಸ್ಥಳದಮೇಲೆ ಒಂದು ಮೇಜೆಯನ್ನಿರಿಸಿ, ಅದರಮೇಲೆ ನೆಲವನ್ನು ತಾಕಿಸಿಕೊಂಡು ಟೇಬಿಲ್ ಕ್ಲಾತ್ ಹರವಿರಬೇಕು. ಆ ಟೇಬಲ್ ಕ್ಲಾತ್ ನಲ್ಲಿ ಕೂಡ ಎರಡು ದೊಡ್ಡ



ಜಾಲ

ದೊಡ್ಡ ಸೀಳುಗಳಿರಬೇಕು. ಆ ಸೀಳು ಗೊತ್ತಾಗದಂತೆ, ಅಲ್ಲಿ ಐಂದ್ರಜಾಲಿಕನ ಹೆಸರೋ, ಬಗೆಬಗೆಯ ಹೂಗಳ ಚಿತ್ರಗಳೋ ಹೊಲಿಸಿರಬಹುದು. ಈ ಮೇಜೆಯ ಮೇಲುಭಾಗವನ್ನೆ ರಂಗಸ್ಥಳವಾಗಿ ಏರ್ಪಾಟುಮಾಡಿಕೊಳ್ಳಲೂ ಬಹುದು. ಐಂದ್ರಜಾಲಿಕನು ಮೇಲೆ ವಿವರಿಸಿದ ಕೋಟು ಪ್ಯಾಂಟುಗಳನ್ನು ಧರಿಸಿಕೊಂಡು ಅಲ್ಲಿಯೇ ನಿಂತು ಮೊದಲನೆ ಸಾರಿ ಪ್ರೇಕ್ಷಕರಿಗೆ ಕಾಣಿಸಬೇಕು. ಅವನು ಒಂದು ಉದ್ದವಾದ ಬೆತ್ತವನ್ನು ಕೈಯಲ್ಲಿ ಹಿಡಿದಿರಬೇಕು. ಇನ್ನೊಂದು ಕೈಯಿಂದ ಹ್ಯಾಟನ್ನು ತೆಗೆದು ಎಲ್ಲರಿಗೂ ನಮಸ್ಕಾರವನ್ನು ಪ್ರದರ್ಶಿಸಬೇಕು. ಆಗ ಅವನು ಮೇಜೆಯಮೇಲೆ ಕುಳಿತಿರುತ್ತಾನೆ. ಅವನ ಎರಡು ಕಾಲುಗಳೂ ನೆಲದಮೇಲೆ ತಾಕಿರುವಂತೆ ಪ್ರೇಕ್ಷಕರು ನಂಬಲು ಎರಡುಮೂರುಬಾರಿ ಕಾಲುಗಳನ್ನು ಆಚೀಚೆ ಅಲುಗಿಸುವನು. ಆಗ ಅಲ್ಲಿ ಮಲಗಿದ್ದ ಎರಡನೇವ್ಯಕ್ತಿ ಪ್ರೇಕ್ಷಕರಿಗೆ ಕಾಣಿಸದು. ಆದರೆ ಅಲುಗುವುದು ಎರಡನೆ ವ್ಯಕ್ತಿಯ ಕಾಲೆ. ಅವನಕಾಲ ಗಂಟೆನಮೇಲೆ ಐಂದ್ರಜಾಲಿಕನು ಎದ್ದುನಿಂತರೆ, ಒಮ್ಮೆಗೇ ಅಷ್ಟುದ್ದ ಕಾಣಿಸುತ್ತಾನೆ! ಈ ಪ್ರದರ್ಶನವನ್ನು ಪ್ರಾರಂಭಿಸುವಾಗಲೂ, ಮುಗಿಸುವಾಗಲೂ ತೆರೆಯನ್ನು ಉಪಯೋಗಿಸುವುದು ಒಳ್ಳೆಯದು.

---

ಈ ಗಾರುಡಿಯ ವಿಷಯ ಇನ್ನೂ ವಿವರವಾಗಿ ತಿಳಿಯಬೇಕಾದರೆ ಓದುಗರು 'ಚಂದಮಾಮ'ನ ಹೆಸರನ್ನು ಉದಾಹರಿಸಿ ನೇರಾಗಿ ಪ್ರೊಫೆಸರರಿಗೇ ಬರೆಯಬೇಕು. ಕಾಗದಗಳನ್ನು ಇಂಗ್ಲಿಷಿನಲ್ಲಿಯೇ ಬರೆಯ ಬೇಕೆಂಬುದು ಮುಖ್ಯ.

ವಿಳಾಸ: ಪ್ರೊಫೆಸರ್ ಪಿ. ಸಿ. ಸರ್ಕಾರ್, ಮೆಜಿಷಿಯನ್
12/3/A, ಜಮೀರ್‌ಲೇನ್, ಬಾಲಿಗಂಜ್, ಕಲಕತ್ತಾ - 19

## ನ ಗೆ ಹ ನಿ

"ಕಳೆದ ಯುದ್ಧದಲ್ಲಿ ನಾನು ಜಪಾನ್ ಸೈನ್ಯವನ್ನೆ ಹಿಡಿದುಹಾಕಿದ್ದೇನೆ ಗೊತ್ತೊ ?"

"ಹೇಗೆ ಹಿಡಿದುಹಾಕಿದ್ದು ?"

"ಫೋಟೋಹಿಡಿದು ಪೇಪರಿನಲ್ಲಿ ಹಾಕಿದ್ದು."

—ಎಸ್. ವಿಶ್ವನಾಥಸೆಟ್ಟಿ, ಉಳ್ಳಾಲ.

* * *

ಟೀಚರ್:—ನೀನು ಬಹಳ ಜಗಳಗಂಟಿ ಕಾಣೆ.

ಹುಡುಗಿ:—ನನಗಿಂತ ನನ್ನಕ್ಕ ಜೋರು ಸರ್.

ಟೀಚರ್ ;—ಅದು ಹೇಗೆ?

ಹುಡುಗಿ:—ನೀವೆ ಹೇಳಿದಿರಲ್ಲಾ ಹಿರಿಯಕ್ಕನ ಚಾಳಿ ಮನೆಮಕ್ಕಳಿಗೆಲ್ಲಾ ಅಂತ!

—ಎಂ. ಮುರುಗೇಶಪ್ಪ, ಕೋಳಿವಾಡ.

* * *

ಟೀಚರ್:—ಗೋಪಿ, ಭೂಮಿ ಗುಂಡಗಾಗಿದೆ ಎಂದು ಹೇಗೆ ಹೇಳುತ್ತಿ ?

ಗೋಪಿ:—ನಾನು ರಾತ್ರಿ ಮಲಗುವಾಗ ಪೂರ್ವಕ್ಕೆ ಇದ್ದ ನನ್ನ ತಲೆ ಬೆಳಗ್ಗೆ ಏಳುವಾಗ ಪಶ್ಚಿಮಕ್ಕೆ ಇರುತ್ತದೆ ಸಾರ್.

—ಎಚ್. ತಿಮ್ಮಪ್ಪಯ್ಯ, ಬಂಟವಾಳ.

---

ಕಳೆದ ತಿಂಗಳಿನ ಚಂದಮಾಮ ೧೨ ನೇ ಪುಟದ ಚಿತ್ರಗಳ ತಪ್ಪುಗಳು :

1. ತಕ್ಕಡಿಗೆ ಮುಮ್ಮೂರು ಸರಪಳಿ ಇರಬೇಕು.
2. ಹೂವಿಗೆ ಕೇಸರವಿರಬೇಕು.
3. ಈ ಸೀ ಚೇ ಯ ರಿ ನ ಹಿಂದಿನಕಾಲಿಗೆ ಆಧಾರವಿರಬೇಕು.
4. ಜೇನುನೊಣಕ್ಕೆ ಇನ್ನೆರಡು ರೆಕ್ಕೆಗಳಿರಬೇಕು.
5. ಕೊಡೆಯೊಳಗೆ ಕಂಬಿಗಳ ಯೋಜನೆ ಬೇಕು.
6. ಕತ್ತರಿಯ ನಡುವೆ ಆಣಿ ಇರಬೇಕು.
7. ಕಪ್ಪಿಗೆ ಒಂದೇ ಹಿಡಿಮಾತ್ರ ಸಾಕು.
8. ಕೈಗೆ ಐದು ಬೆರಳುಗಳಿರಬೇಕು.
9. ಹಸುವಿಗೆ ಕಿವಿಗಳಿರಬೇಕು.

## ಫೋಟೋ ಶೀರ್ಷಿಕೆಯ ಸ್ಪರ್ಧೆ

### ಡಿಸಂಬರ್ ಫೋಟೋಗಳ ಫಲಿತಾಂಶ

ಡಿಸಂಬರ್ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀ ರ್ಷಿ ಕೆ :

ಮೊದಲನೇ ಫೋಟೋ :

ಕಲಿತವ

ಎರಡನೇ ಫೋಟೋ:

ಕಲಿಯುವವ

ಕಳಿಸಿದವರು :

ಕೆ. ಎಚ್. ದೇಶಪಾಂಡೆ,

ಸಪ್ತಾಪೂರ, ಧಾರವಾಡ

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ಡಿಸಂಬರ್ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ಡಿಸಂಬರ್ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.

★

### ಜನವರಿ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

### ಮುಖ್ಯ ಸೂಚನೆ :

ನೀವು ಕಳುಹಿಸುವ ಶೀರ್ಷಿಕೆಗಳನ್ನು ಕಾರ್ಡಿನಲ್ಲಿಯೇ ಬರೆದುಕಳಿಸಬೇಕು. ಕೆಲವರು ಕಾಗದದಲ್ಲಿಬರೆದು ಕವರಿನಲ್ಲಿ ಕಳುಹಿಸುತ್ತಾರೆ. ಇಂತಹವುಗಳು ಪರಿಶೀಲಿಸಲ್ಪಡುವುದಿಲ್ಲ.

# ಫೋಟೋ ಶೀರ್ಷಿಕೆಯ ಸ್ಪರ್ಧೆ

ಜನವರಿ 1953 : : ಬಹುಮಾನ 10/- ರೂ.





ಜನವರಿ ಸಂಚಿಕೆಯಲ್ಲಿ ಬರುವ ಫೋಟೋಗಳು ಮೇಲೆ ಕಾಣಿಸಿರುತ್ತವೆ
ಇವುಗಳಿಗೆ ತಕ್ಕ ಒಂದು ಜತೆ ಶೀರ್ಷಿಕೆ ಬೇಕು.

1. ಶೀರ್ಷಿಕೆಗಳು ಫೋಟೋವಿಗೆ ಸರಿಹೊಂದುವಂತಿರಬೇಕು.
2. ಮುದ್ದಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು.
3. ಮುಖ್ಯವಾಗಿ ಮೊದಲನೆಯ ಫೋಟೋವಿಗೂ ಎರಡನೆಯ ಫೋಟೋವಿಗೂ, ಒಂದಕ್ಕೊಂದು ಸಂಬಂಧಿಸಿಕೊಂಡಿರುವ ಮಾತುಗಳ ವಾಕ್ಯಗಳಾಗಿರಬೇಕು.
4. ಒಬ್ಬೊಬ್ಬರು ಒಂದೊಂದು ಜತೆ ವಾಕ್ಯಗಳಿಗಿಂತ ಹೆಚ್ಚಿಗೆ ಕಳಿಸಕೂಡದು.
5. ಒಂದು ಕಾರ್ಡಿನಲ್ಲಿ ನೀವು ಕಳುಹಿಸುವ ಶೀರ್ಷಿಕೆಗಳೂ, ನಿಮ್ಮ ಹೆಸರು, ವಿಳಾಸಗಳೂ ಸ್ಪಷ್ಟವಾಗಿರಬೇಕು.
6. ನವಂಬರ್ 10-ನೇ ತಾರೀಕಿನೊಳಗೆವಾಕ್ಯಗಳು ನಮಗೆ ಬಂದು ಸೇರಬೇಕು. ಅನಂತರ ಬಂದುವುಗಳಿಗೆ ಗಮನಕೊಡಲಾಗುವುದಿಲ್ಲ.
7. ನಮಗೆ ಸೇರಿದ ವಾಕ್ಯಗಳಲ್ಲೆಲ್ಲಾ ಅತ್ಯುತ್ತಮವಾದ ಒಂದು ಜತೆಗೆ (ಅಂದರೆ ಎರಡು ಫೋಟೋ ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುವುದು.
8. ಶೀರ್ಷಿಕೆ ವಾಕ್ಯಗಳನ್ನು ಕಳುಹಿಸಬೇಕಾದ ವಿಳಾಸ:

: ಫೋಟೋ ಶೀರ್ಷಿಕೆಯ ಸ್ಪರ್ಧೆ :

**ಚಂದಮಾಮ ಪಬ್ಲಿಕೇಷನ್ಸ್** ವಡಪಳನಿ ಪೋಸ್ಟ್ :: ಮದರಾಸು - 26.

Photo by Pranlal K. Patel



ಬಹುಮಾನ
ಪಡೆದ ಶೀರ್ಷಿಕೆ

ತಿನ್ನುತ್ತಾ ವ್ಯಾಯಾಮ

ಕಳಿಸಿದವರು :
ಸಿ. ಜಗದಾಂಬಾ ಮಲ್ಲೇಶ್ವರಂ, ಬೆಂಗಳೂರು

